# ಪ್ರೇಮ್‌ಚಂದ್ ಅವರ ಗೋದಾನ ಕಾದಂಬರಿಯ ವಿಶ್ಲೇಷಣೆ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಎಂ.ಫಿಲ್ ಸಂಪ್ರಬಂಧ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

2009-2010

903

# ಪ್ರೇಮ್‌ಚಂದ್ ಅವರ ಗೋದಾನ ಕಾದಂಬರಿಯ ವಿಶ್ಲೇಷಣೆ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ




ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ


2009-2010

**ಪರಿವಿಡಿ**

## ಅಧ್ಯಾಯ ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರೇಮ್‌ಚಂದ್ ಅವರು ಭಾರತೀಯ ಕಥಾ ಸಾಹಿತ್ಯದಲ್ಲಿ ಅಜರಾಮರರು. ಅವರು ಬರೆದುದು ಹಿಂದಿ ಭಾಷೆಯಲ್ಲಾದರೂ ಅದು ಆ ಭಾಷೆಯ ಪರಿಧಿಯನ್ನು ಮೀರಿ ಭಾರತೀಯ ಅನೇಕ ಭಾಷೆಗಳ ಅನುವಾದಿತ ಸಾಹಿತ್ಯವಾಗಿ ಅಸಂಖ್ಯ ಓದುಗರನ್ನು ತಲುಪಿತು. ವಿಶ್ವ ಸಾಹಿತ್ಯದಲ್ಲಿ ರಷ್ಯಾದ ಟಾಲ್‌ಸ್ಟಾಯ್‌ಗಿರುವ ಖ್ಯಾತಿ ಭಾರತದಲ್ಲಿ ಪ್ರೇಮ್‌ಚಂದ್ ಅವರಿಗಿದೆ. ಭಾರತೀಯ ಸಮಾಜದ ಬಗ್ಗೆ ಪ್ರೇಮ್‌ಚಂದ್ ಅವರು ತಮ್ಮ ಕಥಾ ಸಾಹಿತ್ಯದ ಮೂಲಕ ಕೊಡುವ ಸೂಕ್ಷ್ಮಾತಿಸೂಕ್ಷ್ಮ ಒಳನೋಟಗಳು ಅಸಾಮಾನ್ಯ ಹಾಗೂ ಅಸಾಧಾರಣ. ಪ್ರೇಮ್‌ಚಂದ್ ಅವರ ಕಥಾ ಸಾಹಿತ್ಯ ಕನ್ನಡಕ್ಕೆ ಸಾಕಷ್ಟು ಅನುವಾದದ ರೂಪದಲ್ಲಿ ಬಂದಿದೆ. ಕನ್ನಡದ ಗಂಭೀರ ಕತೆಗಾರರು ಹಾಗೂ ಕಾದಂಬರಿಕಾರರು ಪ್ರತ್ಯಕ್ಷವಾಗಿಯೊ, ಪರೋಕ್ಷವಾಗಿಯೊ ಅವರ ಸೃಜನಶೀಲತೆಯ ಪ್ರಭಾವಕ್ಕೆ ಒಳಗಾಗಿದ್ದಾರೆ. ಅವರ 'ಗೋದಾನ' ಕಾದಂಬರಿ ಕನ್ನಡದ ಕಾದಂಬರಿಗಳ ಸಮುದಾಯದೊಳಗೆ ಎಂದೋ ಸೇರಿಹೋಗಿದೆ. ಅದು ಈಗ ಹಿಂದಿಯ ಅನುವಾದಿತ ಕಾದಂಬರಿ ಎನ್ನಲಾಗದಷ್ಟು ಕನ್ನಡ ಕಾದಂಬರಿಗಳ ಓದುಗರ ಪ್ರಜ್ಞೆಯೊಳಗೆ ಅಡಗಿ ಕೂತಿದೆ. ಕನ್ನಡ ಕಥಾ ಸಾಹಿತ್ಯವನ್ನು ಅಧ್ಯಯನ ಮಾಡುವವರು ಪ್ರೇಮ್‌ಚಂದ್ ಅವರನ್ನು ಓದಿದರೆ ಆ ಅಧ್ಯಯನವು ಪಡೆಯುವ ಆಕಾರವೇ ಬೇರೆ. ಅಲ್ಲದೆ ಯಾವುದೇ ಉತ್ತಮ ಅಥವಾ ಗಂಭೀರ ಸಾಹಿತಿಯ ಸಾಹಿತ್ಯವು ಕೇವಲ ಪ್ರಾದೇಶಿಕವಾಗಿಯೊ ಅಥವಾ ಒಂದು ಭಾಷೆಯ ಎಲ್ಲೆಯೊಳಗೊ ಮಾತ್ರ ಇರುವುದಿಲ್ಲ. ಅದು ಪ್ರಾದೇಶಿಕ ಹಾಗೂ ಭಾಷಿಕ ಗಡಿಗಳನ್ನು ಮೀರಿ ಓದುಗರ ಹಿನ್ನೆಲೆ ಹಾಗೂ ಧೋರಣೆಯನ್ನು ಆಧರಿಸಿ ಅವರ ಪ್ರಜ್ಞೆಯ ಭಾಗವಾಗುತ್ತದೆ. ಭಾರತೀಯ ಸಾಹಿತ್ಯದ ಅನೇಕ ಗಂಭೀರ ಓದುಗರು ಪ್ರೇಮ್‌ಚಂದ್ ಅವರನ್ನು, ವಿ.ಎಸ್. ಖಾಂಡೇಕರ್ ಅವರನ್ನು, ರವೀಂದ್ರನಾಥ ಟ್ಯಾಕೋರ್ ಅವರನ್ನು ಹಾಗೂ ಬಂಕಿಮ ಚಂದ್ರರನ್ನು ಇದೇ ರೀತಿಯಲ್ಲಿ ಓದಿದ್ದಾರೆ ಮತ್ತು ಪ್ರತಿಕ್ರಿಯಿಸಿದ್ದಾರೆ.

ಪ್ರೇಮ್‌ಚಂದ್ ಅವರು ಭಾರತೀಯ ಸಾಹಿತ್ಯದ ಮೇರು ಬರಹಗಾರರು. ವಸಾಹತುಶಾಹಿ ಕಾಲದ ಭಾರತೀಯ ಸಮಾಜದ ಚಲನಶೀಲ ಅಂತರಂಗವನ್ನು ಅದರೆಲ್ಲ ವೈರುಧ್ಯಮಯ ಸಂಕೀರ್ಣಗಳನ್ನು ತಮ್ಮ ಸೂಕ್ಷ್ಮ ಗ್ರಹಿಕೆ ಮತ್ತು ಅಭಿವ್ಯಕ್ತಿಯ ಮೂಲಕ ಸೃಷ್ಟಿ ಮಾಡಿದವರು. ಊಳಿಗಮಾನ್ಯಶಾಹಿಯ ದರ್ಪ, ದಬ್ಬಾಳಿಕೆ, ಕ್ರೌರ್ಯ, ಹಿಂಸೆ, ಅಪಮಾನ, ಅವಮಾನ ಹಾಗೂ ವಿವಿಧ ಬಗೆಯ ಪ್ರತಿರೋಧಗಳನ್ನು ಸದ್ದಿಲ್ಲದ ಮತ್ತು ವಾಚ್ಯವಾಗದ ರೂಪದಲ್ಲಿ ಸಾಹಿತ್ಯವಾಗಿಸಿದವರು. ಆಳು ಒಡೆಯರ ಸಂಬಂಧಗಳು, ಗಂಡು ಹೆಣ್ಣಿನ ಕೌಟುಂಬಿಕ ಮತ್ತು ಕೌಟುಂಬಿಕೇತರ ಸಂಬಂಧಗಳು ಸಹಜವಾಗಿ ಪ್ರತಿಯೊಂದು ವರ್ಗವೂ ನಿತ್ಯ ಅನುಭವಿಸುವ ಸೂಕ್ಷ್ಮ ನೋವು

ನಲಿವುಗಳನ್ನು ತಮ್ಮ ಹರಿತವಾದ ಲೇಖನಿಯ ಮೂಲಕ ಸಾಹಿತ್ಯವಾಗಿ ಒಡಮೂಡಿಸಿದವರು. ಭಾರತೀಯ ಸಂದರ್ಭದಲ್ಲಿ ಸಮಾಜವಾದಿ ಸಾಹಿತ್ಯ ನಿರ್ಮಾಣದಲ್ಲಿ ಪ್ರೇಮ್‌ಚಂದ್ ಅವರು ಪ್ರಮುಖರು.

ಅಸಮಾನತೆ, ಅನ್ಯಾಯ, ಶೋಷಣೆಗಳ ನಾನಾ ಮುಖಗಳನ್ನು ತಮ್ಮ ಬರಹಗಳಲ್ಲಿ ಸೂಕ್ಷ್ಮಾತಿಸೂಕ್ಷ್ಮ ಸ್ವರೂಪದಲ್ಲಿ ನಿರೂಪಿಸಿದವರು. ಕಲೆ, ಸಾಹಿತ್ಯ, ಸಂಸ್ಕೃತಿ ಮುಂತಾದ ವಿಷಯಗಳನ್ನು ವಸಾಹತುಶಾಹಿ ದೃಷ್ಟಿಕೋನದಿಂದ ಗ್ರಹಿಸುವಂತಹ ಚಾರಿತ್ರಿಕ ಇಕ್ಕಟ್ಟಿನ ಸಂದರ್ಭದಲ್ಲೂ ತಮ್ಮ ಲೇಖನಿಯನ್ನು ಸಾಹಿತ್ಯ ಸೃಷ್ಟಿಗೆ ಪ್ರಯೋಗಿಸಿದ ಪ್ರೇಮ್‌ಚಂದ್ ಅವರು ವಸಾಹತುಶಾಹಿ ದೃಷ್ಟಿಕೋನದ ಗ್ರಹಿಕೆಯ ವಿರುದ್ಧ ಸೆಟೆದು ನಿಂತವರು. ಅವರ ಸಮಕಾಲೀನರಲ್ಲಿ ಅನೇಕರು ವಸಾಹತು ದೃಷ್ಟಿಕೋನದ ಮೂಲಕ ಸಾಹಿತ್ಯ ನಿರ್ಮಾಣ ಮಾಡುತ್ತಿದ್ದ ಕಾಲದಲ್ಲಿ ಪ್ರೇಮ್‌ಚಂದ್ ಅವರು ಸಮಾಜವಾದಿ ಸಾಮಾಜಿಕ ಗ್ರಹಿಕೆ ಹಾಗೂ ಸಾಹಿತ್ಯಕ ಗ್ರಹಿಕೆಯ ನೆಲೆಗಳನ್ನು ಸಾಮಾಜಿಕ ಬದ್ಧತೆಯಿಂದ ಜೀರ್ಣಿಸಿಕೊಂಡವರು. ಹಾಗಾಗಿಯೇ ಪ್ರೇಮ್‌ಚಂದ್ ಅವರಿಗೆ ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ಬೇರೆಯವರಿಗಿಂತ ವಿಭಿನ್ನ ಗ್ರಹಿಕೆ ಹಾಗೂ ಜನತೆಯ ದೃಷ್ಟಿಕೋನವನ್ನು ಸಾಹಿತ್ಯ ನಿರ್ಮಾಣದಲ್ಲಿ ರೂಪಿಸಲು ಹಾಗೂ ಅದನ್ನು ಅಭಿವೃದ್ಧಿಪಡಿಸಲು ಸಾಧ್ಯವಾಯಿತು.

೬೦–೭೦ರ ದಶಕದಿಂದಲೇ ಪ್ರೇಮ್‌ಚಂದ್ ಅವರ ಸಾಹಿತ್ಯ ಕನ್ನಡಕ್ಕೆ ಅನುವಾದಗೊಳ್ಳತೊಡಗಿತು. ಆ ಕಾಲದ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಒತ್ತಡಗಳು ಪ್ರೇಮ್‌ಚಂದ್ ಅಂತಹವರ ಸಾಹಿತ್ಯವನ್ನು ಕನ್ನಡಕ್ಕೆ ತರುವಲ್ಲಿ ಚಾರಿತ್ರಿಕ ಪಾತ್ರವನ್ನು ವಹಿಸಿತು. ಪ್ರೇಮ್‌ಚಂದ್ ಅವರ ಸಾಹಿತ್ಯ ಕನ್ನಡಕ್ಕೆ ಬರುವ ಮೊದಲೆ ಪ್ರೇಮ್‌ಚಂದ್ ಅವರ ಗಾಢವಾದ ಪ್ರಭಾವ ಕನ್ನಡದ ಬಹಳಷ್ಟು ಲೇಖಕರ ಮೇಲಾಗಿದೆ. ಕನ್ನಡದಲ್ಲಿ ಕ್ವಚಿತ್ ಆಗಿ ಬಂದಿರುವ ಸಮಾಜವಾದಿ ಆಶಯದ ಪ್ರಗತಿಶೀಲ ಸಾಹಿತ್ಯ ನಿರ್ಮಾಣದ ಹಿಂದೆ ಪ್ರೇಮ್‌ಚಂದ್ ಅವರ ಗಟ್ಟಿಯಾದ ಪ್ರಭಾವ ಇರುವುದು ಬಹಳ ಮುಖ್ಯವಾದ ಸಂಗತಿ. ಪ್ರೇಮ್‌ಚಂದ್ ಅವರ ಸಣ್ಣ ಕಥೆಗಳು ಕನ್ನಡ ಸಾಹಿತ್ಯದ ಗಂಭೀರ ಓದುಗ ವಲಯದಲ್ಲಿ ಚಿರಪರಿಚಿತ. ಅದರಲ್ಲೂ ಅವರ 'ಹೆಣದ ಬಟ್ಟೆ' ಕಥೆಯು ನಾಟಕ ಕೃತಿಯಾಗಿ ಹೆಸರು ಮಾಡಿದೆ. ಕನ್ನಡದ ದಲಿತ, ಬಂಡಾಯ ಸಾಹಿತ್ಯ ನಿರ್ಮಾಣದ ಹಿಂದೆ ಪ್ರೇಮ್‌ಚಂದ್ ಅವರ ಬಿಡಿಬಿಡಿಯಾದ ಪ್ರಭಾವ ಇದೆ. ಇದು ಕನ್ನಡದ ಸೃಜನಶೀಲ ಸಾಹಿತ್ಯದ ಮೇಲೆ ಮಾತ್ರ ಅಲ್ಲದೆ ವೈಚಾರಿಕ ಸಾಹಿತ್ಯದ ಮೇಲೂ ಆಗಿದೆ ಎಂಬುದು ಗಮನಿಸಬೇಕಾದ ಸಂಗತಿ.

ಪ್ರೇಮ್‌ಚಂದ್ ಅವರು ಒಟ್ಟು ೧೩ ಕಾದಂಬರಿಗಳನ್ನು ಬರೆದಿದ್ದಾರೆ. ಅವುಗಳೆಂದರೆ, ೧. ಸೇವಾ ಸದನ, ೨. ಪ್ರೇಮಾಶ್ರಮ, ೩. ರಂಗಭೂಮಿ, ೪. ಕಾಯಕಲ್ಪ, ೫. ವರದಾನ, ೬. ನಿರ್ಮಲ, ೭. ಪ್ರತಿಕ್ಷ, ೮. ಗಬನ್, ೯. ಕರ್ಮಭೂಮಿ, ೧೦. ಗೋದಾನ, ೧೧. ಮಂಗಳಸೂತ್ರ, ೧೨. ದೇವಸ್ಥಾನದ ರಹಸ್ಯ, ೧೩. ಪ್ರೇಮ.

ಇವುಗಳಲ್ಲಿ 'ಗೋದಾನ' ಕಾದಂಬರಿಯು ಕನ್ನಡ ಸಾಹಿತ್ಯ ನಿರ್ಮಾಪಕರನ್ನು ಮತ್ತು ಓದುಗರನ್ನು ಬೇರೆಬೇರೆ ಆಯಾಮಗಳಲ್ಲಿ ಪ್ರಭಾವಿಸಿದೆ ಮತ್ತು ಪ್ರೇರೇಪಿಸಿದೆ. ಪ್ರೇಮ್‌ಚಂದ್ ಅವರು ೨೫೦ಕ್ಕೂ ಹೆಚ್ಚು ಸಣ್ಣ ಕಥೆಗಳನ್ನು ಬರೆದಿದ್ದಾರೆ.

ಈ ಬಗೆಯ ಸಾಹಿತ್ಯಕವಾದ, ಸಾಂಸ್ಕೃತಿಕವಾದ ಮತ್ತು ಸಮಾಜವಾದಿ ಸೃಜನಶೀಲ ಆಶಯವುಳ್ಳ ಪ್ರೇಮ್‌ಚಂದ್ ಅವರ 'ಗೋದಾನ' ಕಾದಂಬರಿಯನ್ನು ಅಧ್ಯಯನ ಮಾಡುವುದು ಇಲ್ಲಿಯ ಉದ್ದೇಶ. ಸಮಾಜವಾದಿ ಆಶಯದ ಲೇಖಕರ 'ಗೋದಾನ' ಕಾದಂಬರಿಯು ತನ್ನ ಸಮಾಜವಾದಿ ಆಶಯಗಳನ್ನು ಸೃಜನಶೀಲ ಪಠ್ಯವಾಗಿಸಿರುವ ನಿರೂಪಣೆಯ ಕೆಲವು ಮುಖ್ಯ ಆಯಾಮಗಳನ್ನು ಪಠ್ಯದ ಒಳವಿವರಗಳ ಮೂಲಕವೇ ಅಧ್ಯಯನ ಮಾಡುವುದು ಇಲ್ಲಿಯ ಉದ್ದೇಶ. ಈ ಅಧ್ಯಯನದ ವ್ಯಾಪ್ತಿ ಎಂದರೆ ಪ್ರಧಾನವಾಗಿ ಪ್ರೇಮ್‌ಚಂದ್ ಅವರ 'ಗೋದಾನ' ಕಾದಂಬರಿಯೇ. ಜೊತೆಗೆ ಅವರ 'ಗೋದಾನ' ಕಾದಂಬರಿಯ ಮೇಲೆ ಕನ್ನಡದಲ್ಲಿ ವಿಮರ್ಶೆ ಬಂದಿರುವುದು ಕಡಿಮೆ ಅಥವಾ ಇಲ್ಲವೆಂದೂ ಹೇಳಬಹುದು. ಹಾಗಾಗಿ 'ಗೋದಾನ' ಕಾದಂಬರಿಯ ಕೆಲವು ಮುಖ್ಯ ಆಯಾಮಗಳ ಚರ್ಚೆಯ ಸಂದರ್ಭದಲ್ಲಿ ಕನ್ನಡದ ಪ್ರಾಚೀನ ಕೃತಿಗಳಿರಬಹುದು ಇಲ್ಲವೆ ಆಧುನಿಕ ಕೃತಿಗಳಿರಬಹುದು. ಅವುಗಳ ಸೂಕ್ಷ್ಮ ಎಳೆಗಳನ್ನು ಸಾಂದರ್ಭಿಕವಾಗಿ ಚರ್ಚೆಯ ಕಕ್ಷೆಗೆ ತರಲಾಗುವುದು. ಆ ಮೂಲಕ ಸೃಜನಶೀಲ ಸಾಹಿತ್ಯದ ನಂಟು ಎಂಬುದು ಅಥವಾ ಸಾಹಿತ್ಯದಲ್ಲಿ ಸೃಜನಶೀಲತೆಯ ನಂಟು ಎಂಬುದು ಅದು ಭಾಷಿಕ ಗಡಿಗಳನ್ನು ಮೀರಿ, ಅಂತಿಮವಾಗಿ ಮಾನವರ ಒಳತೋಟಿಗಳನ್ನು ಹಾಗೂ ಒಳತುಡಿತಗಳ ಸೂಕ್ಷ್ಮ ಸ್ವಭಾವಗಳನ್ನು ನಿರೂಪಿಸುತ್ತದೆ ಎಂಬ ಚರ್ಚೆಗೆ ತೆಗೆದುಕೊಳ್ಳಲಾಗುವುದು.

## ಅಧ್ಯಾಯ ೨

## ಗೋದಾನ ಕಾದಂಬರಿಯಲ್ಲಿ ಭೂಮಾಲೀಕರು ಮತ್ತು ಗೇಣಿದಾರರ ಸಂಬಂಧಗಳು

ಪ್ರೇಮ್‌ಚಂದ್ ಅವರ 'ಗೋದಾನ' ಕಾದಂಬರಿಯು ಭಾರತದ ರೈತರ ಮಹಾಕಾವ್ಯವೆಂದು ಕರೆಯುವುದರ ಜೊತೆಗೆ ಪ್ರಗತಿಶೀಲ ಸಾಹಿತ್ಯ ಪಂಥದಲ್ಲಿ ಒಂದು ವಿಭಿನ್ನತೆಯನ್ನು ಹೊಂದಿರುವ ಕಥೆಯಾಗಿದೆ. ಗೋದಾನ ಕಾದಂಬರಿಯು ರೈತರ ಜೀವನ ವೃತ್ತಾಂತವನ್ನು ನಿರೂಪಿಸುವ ಮತ್ತು ರೈತಾಪಿ ಬದುಕಿನ ಹಲವು ವಿನ್ಯಾಸಗಳನ್ನು ವಿವರಿಸುವ ಒಂದು ಕಥೆಯಾಗಿದೆ.

ಗೋದಾನ ಕಾದಂಬರಿಯಲ್ಲಿ ರೈತಾಪಿ ವರ್ಗ ಹಾಗೂ ಶ್ರೀಮಂತ ವರ್ಗಗಳು ನಿರೂಪಣೆಗೊಂಡಿದ್ದು ಇಲ್ಲಿ ರೈತರ ಹಾಗೂ ಶ್ರೀಮಂತರ ನಡುವಿನ ಸಂಬಂಧಗಳು ಹಾಗೂ ಅವರಲ್ಲಿ ನಡೆಯುವ ಸಂಘರ್ಷದ ಸಂಬಂಧಗಳನ್ನು ಹಾಗೂ ಶೋಷಣೆಯ ನಾನಾ ಮುಖಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

ರೈತರ ಹಾಗೂ ಶ್ರೀಮಂತರ ನಡುವಿನ ಅಂತರದಲ್ಲಿ ಶ್ರೀಮಂತರು ಕಥಾ ನಾಯಕನಾದ ಹೋರಿ ರಾಮನ ಮೇಲೆ ಮಾಡುವ ಶೋಷಣೆ ಹಾಗೂ ಅವನ ಬದುಕಿನ ಹೋರಾಟವನ್ನು ಅಲ್ಲದೆ ಒಡೆಯರ ನೀತಿ ನಿಯಮಗಳು ಆಜ್ಞೆಗಳ ಹಿನ್ನೆಲೆಯಲ್ಲಿ ರೈತರ ಪರಿಸ್ಥಿತಿಯನ್ನು ನೋಡುವಂತಹದ್ದು. ಆಳು–ಒಡೆಯ ಸಂಬಂಧದಲ್ಲಿ ಯಾವ ಯಾವ ಅಂಶಗಳ ಬಗ್ಗೆ ಚರ್ಚಿಸಲಾಗಿದೆ ಎಂಬುದನ್ನು ಈ ಆಳು–ಒಡೆಯರ ಸಂಬಂಧ ಗೋದಾನ ಕಾದಂಬರಿಯಲ್ಲಿ ಮೂಡಿರುವ ಚಿತ್ರಣವಾಗಿದೆ. ಗೋದಾನ ಕಾದಂಬರಿಯಲ್ಲಿ ಮೊದಲೇ ಹೇಳಿದಂತೆ ಶೋಷಕ ಮತ್ತು ಶೋಷಿತ ಎಂಬ ಎರಡು ವರ್ಗಗಳ ಬದುಕು ನಿರೂಪಣೆಯಾಗಿರುವುದನ್ನು ಕಾಣಬಹುದು. ಇಲ್ಲಿ ಶೋಷಕ ವರ್ಗದವರು ಶ್ರೀಮಂತರು ಹಾಗೂ ಲೇವಾದೇವಿ ಮಾಡುವವರು, ಪಂಚರು ಇನ್ನೂ ಮುಂತಾದ ಶ್ರೀಮಂತ ವ್ಯಕ್ತಿಗಳಾದರೆ; ಶೋಷಿತ ವರ್ಗವೂ ಸಹ ರೈತರನ್ನು ಹೋರಿರಾಮ ತನ್ನ ಕುಟುಂಬದವರು, ಸಿಲಿಯಾ ಹಾಗೂ ಕುಟುಂಬ, ಭೋಲಾ ಹೀಗೆ ಇನ್ನೂ ಮುಂತಾದ ಬಡವರ ವರ್ಗವು ನಿರೂಪಣೆಗೊಂಡಿದೆ. ಹೀಗೆ ಉಳ್ಳವರು ಇಲ್ಲದವರ ಮೇಲೆ ನಡೆಸುವ ದೌರ್ಜನ್ಯ ಬಹಳ ಗಂಭೀರವಾಗಿ ಹಾಗೂ ಅತ್ಯಂತ ಧಾರುಣವಾಗಿ ಈ ಕಾದಂಬರಿಯಲ್ಲಿ ಮೂಡಿಬಂದಿದೆ.

ರೈತ ಎಂದ ಕೂಡಲೆ ನಮಗೆ ಸಾಮಾನ್ಯವಾಗಿ ಅನಿಸುವುದು ಆತ ಅನ್ನದಾತ, ದೇಶದ ಬೆನ್ನೆಲುಬು ಎಂದು. ಆತ ತಾನು ಕೈ ಕೆಸರು ಮಾಡಿಕೊಂಡು ಕೋಟ್ಯಂತರ ಶ್ರೀಮಂತರ ಪಾಲಿಗೆ ಅನ್ನ ಹಾಕುವ ರೈತ. (ಇಂತಹ ವ್ಯಕ್ತಿಯನ್ನು) ಇದಕ್ಕೆ ಪ್ರತಿರೂಪವನ್ನು ನೀಡಿದಂತಹ ಹೋರಿ ರಾಮನನ್ನು 'ಗೋದಾನ' ಕಾದಂಬರಿಯೊಳಗೆ ಶೋಷಣೆ ಮಾಡುವಂತಹ ಸನ್ನಿವೇಶವನ್ನು ಕಾಣಬಹುದು. ಉಳ್ಳವರು ಇಲ್ಲದವರ

ಮೇಲೆ ತಮ್ಮ ಎಲ್ಲಾ ಭಾರವನ್ನು ಹಾಕಿ ಬಡವರ ಶ್ರಮದಲ್ಲಿ ತಮ್ಮ ಬದುಕನ್ನು ಹಸನು ಮಾಡಿಕೊಳ್ಳುವವರು. ದುರಾಸೆಯಿಂದ ರೈತನನ್ನು ಕಿತ್ತು ತಿನ್ನುವ ದೃಶ್ಯಗಳನ್ನು ಗೋದಾನ ಕಾದಂಬರಿಯ ಆಳು-ಒಡೆಯರ ಸಂಬಂಧದಲ್ಲಿ ಮನಮುಟ್ಟುವಂತೆ ಪ್ರೇಮ್‌ಚಂದ್ ಅವರು ಚಿತ್ರಿಸಿದ್ದಾರೆ. ಆ ಮೂಲಕ ಭಾರತದ ರೈತರ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುತ್ತದೆ. 'ಗೋದಾನ' ಕಾದಂಬರಿಯಲ್ಲಿ ರಾಯಸಾಹೇಬ ಅಮರಪಾಲ್ ಸಿಂಹ ಸೇವೂರಿನಲ್ಲಿ ವಾಸಿಸುವ ಒಬ್ಬ ಶ್ರೀಮಂತ ಜಮೀನುದಾರನಾಗಿದ್ದಾನೆ. ಇವರು ಸತ್ಯಾಗ್ರಹ ಸಂಗ್ರಾಮದಲ್ಲಿ ಸಾಕಷ್ಟು ಕೀರ್ತಿ ಗಳಿಸಿದ್ದರು. ಕೌನ್‌ಸಿಲ್‌ನ ಸದಸ್ಯತ್ವವನ್ನು ತ್ಯಜಿಸಿ ಜೈಲಿಗೆ ಹೋಗಿ ಬಂದಿದ್ದರೂ, ಆ ದಿನದಿಂದ ಈ ದಿನದವರೆಗೆ ಈತನ ಇಲಾಖೆಯ ರೈತರಿಗೆ ಅವರ ಬಗ್ಗೆ ಶ್ರದ್ಧೆ ಹೆಚ್ಚಾಗಿತ್ತು. ರೈತರು ಈ ರೀತಿಯ ಪ್ರೀತಿ, ಶ್ರದ್ಧೆ, ಗೌರವಗಳಿಂದ ನಡೆದುಕೊಂಡರೂ, ಸಂಸ್ಥಾನದ ರೈತರಿಗೆ ಯಾವುದೇ ರೀತಿಯ ವಿಶೇಷವಾದ ರಿಯಾಯಿತಿ ಏನೂ ಸಿಗುತ್ತಿರಲಿಲ್ಲ. ಜುಲ್ಮಾನೆ ಹಾಗೂ ಜೀತದ ಕ್ರೂರ ಪರಿಸ್ಥಿತಿಯಲ್ಲಿ ಯಾವುದೇ ರೀತಿಯ ಸಡಿಲಿಕೆ ಕಂಡುಬರುತ್ತಿರಲಿಲ್ಲ.

ರಾಯಸಾಹೇಬರ ಹಾಗೂ ಹೋರಿಯ ನಡುವಿನ ಸಂಬಂಧವೂ ಪ್ರೀತಿ ಹಾಗೂ ಸ್ನೇಹದಿಂದ ಕೂಡಿತ್ತು. ಆದರೆ ಅದು ಕೇವಲ ಮಾತುಗಳಿಗೆ ಸೀಮಿತವಾಗಿ ವ್ಯವಹರಿಸಲ್ಪಡುತ್ತಿತ್ತು. ಹೋರಿರಾಮ ಒಂದು ಸಲ, ಎರಡನೇ ಸಲ ರಾಯಸಾಹೇಬನ ಮನೆ ಬಾಗಿಲಿಗೆ ಹೋಗಿಬಂದು ಮಾಡಿದರೂ ಈತನ ಎಲ್ಲಾ ನೋವನ್ನು ಹಂಚಿಕೊಳ್ಳುವ ಹೊಣೆ ಹೋರಿಗಿದ್ದರೂ ಅದು ಕೇವಲ ರಾಯಸಾಹೇಬನ ಮನಸ್ಸಿನ ಹಗುರಕ್ಕೆ ಮಾತ್ರ ಕಾರಣವಾಗುತ್ತದೆ.

ಹಳ್ಳಿಯ ರೈತರ ವಿಷಯದಲ್ಲೂ ರಾಯಸಾಹೇಬನ ನಿಲುವು ಏಕದೃಷ್ಟಿಕೋನವಾಗಿ ನಡೆಯುತ್ತಿತ್ತು. ಇವರ ದೃಷ್ಟಿಯಲ್ಲಿ ಹೋರಿ ಮತ್ತು ರೈತರು ಹಾಗೂ ತಮ್ಮವರು ಹಾಗೂ ಬೇರೆಯವರು ಹಣದ ಮುಂದೆ, ಬಾಕಿ ವಸೂಲಿಯ ಮುಂದೆ ತಮಗೆ ಲಾಭ ಗಳಿಸುವ ವಿಧಾನದಲ್ಲಿ ವ್ಯವಹಾರದ ಹಿನ್ನೆಲೆಯಲ್ಲಿ ಸಮಾನವಾಗಿ ಕ್ರಿಯಾಶೀಲರಾಗವುದನ್ನು ಇಲ್ಲಿ ಗಮನಿಸಬಹುದು.

ರಾಯಸಾಹೇಬನ ಕ್ರೌರ್ಯವು ಅವರ ಪ್ರತಿನಿಧಿಗಳ ತಲೆಗೆ ಕಟ್ಟಲ್ಪಡುತ್ತಿತ್ತು. ಅದೇ ವ್ಯವಸ್ಥೆಯ ಗುಲಾಮರು ಇವರ ಆಜ್ಞೆಯಂತೆ ರೈತರಿಂದ ಗೇಣಿ, ಕಪ್ಪಕಾಣಿಕೆ ಹಾಗೂ ದಂಡ ಇನ್ನಿತರ ವಿಷಯಗಳಿಗೆ ಸಂಬಂಧಿಸಿದ ವಸೂಲಿ ಕೆಲಸ ಇವರದಾಗಿತ್ತು. ಆಜ್ಞೆ ಅವರದು ಕೆಲಸ ಇವರದು. ಆದರೆ ಶ್ರಮ ಮಾತ್ರ ನಮ್ಮ ಬಡ ರೈತನದು. ಇದರಿಂದ ರಾಯಸಾಹೇಬನ ಸಜ್ಜನಿಕೆಯ ಮೇಲೆ ಯಾವ ಪ್ರಭಾವವೂ, ಯಾವ ಕಳಂಕವೂ ಬೀಳುತ್ತಿರಲಿಲ್ಲ. ಹಾಗೇ ನಡೆದುಕೊಂಡು ರೈತರ ಜೊತೆಗೆ ನಗುತ್ತಲೇ ಅವರನ್ನು ಶೋಷಣೆ ಮಾಡುವುದು ನಡೆಯುತ್ತಿತ್ತು.

'ಸಿಂಹದ ಕೆಲಸವೇ ಬೇಟೆಯಾಡುವುದು. ಅದೇನಾದರೂ ಗರ್ಜಿಸಿ ಗುರ‍್ರೆನ್ನುವ ಬದಲು ಸಿಹಿ ಮಾತನ್ನಾಡುವಂತಿದ್ದರೆ ಕೂತಲ್ಲಿಯೇ ಅದಕ್ಕೆ ಬೇಟೆ ಸಿಗುವುದು'. ಹಾಗೇ ರಾಯಸಾಹೇಬನ ವರ್ತನೆ ಮುಂದುವರಿಯುತ್ತಿತ್ತು.

ಜೇಷ್ಠ ಮಾಸದ ದಸರೆಯ ಸಂದರ್ಭದಲ್ಲಿ ಅಲ್ಲಿ ಕೂಲಿ ಮಾಡುವವರು ಹಸಿವಿಗಾಗಿ ಊಟ ಕೇಳಿದರೆ ಅವರ ಮೇಲೆಯೇ ಬೈಗುಳಗಳ ಸುರಿಮಳೆ ಗೈಯುವರು. ಬಿಟ್ಟಿ ಕೆಲಸ ಮಾಡಿಸಿಕೊಂಡು, ಬಡವರು ಸಹ ಮನುಷ್ಯರು. ಅವರಿಗೆ ಒಂದು ಹೊತ್ತಿನ ಊಟವನ್ನೂ ಕೊಡದೆ ದಬ್ಬಾಳಿಕೆಯಿಂದ ಕೆಲಸ ತೆಗೆದುಕೊಳ್ಳುವ ಶ್ರೀಮಂತರು. ಕೂಲಿಯವರು ಇದನ್ನು ವಿರೋಧಿಸಿದರೆ ಅವರಿಗೆ ಶಿಕ್ಷೆಯ ಮೂಲಕ ಅವರ ಬದುಕನ್ನು ತುಳಿದು ಹಾಕುವ ರೀತಿಯಲ್ಲಿ ಬಡವರನ್ನು ಶೋಷಣೆ ಮಾಡುವಂತಹ ಪರಿಸ್ಥಿತಿ ಇತ್ತು.

ತಮ್ಮ ಈ ವೈಭವದ ಖರ್ಚು-ವೆಚ್ಚ ಭರಿಸುವುದು ಹಳ್ಳಿ ಜನಗಳ ಕಾಣಿಕೆ ಹಣದಿಂದ. ಕಡ್ಡಾಯವಾಗಿ ಹೋರಿರಾಮನ ಕೈಯಲ್ಲಿ ನಯವಾಗಿ ಹಣವನ್ನು ಕೊಡುವಂತೆ ಆಜ್ಞೆ ಹೊರಡಿಸುವುದು. 'ಹೋರಿ ಕಡೆ ತಿರುಗಿ ಹೇಳಿದರು. ಹೋರಿ ಈಗ ನೀನು ಹೋಗಿ ನಿನ್ನ ಸಿದ್ಧತೆ ಮಾಡಿಕೊ. ನಾನು ಹೇಳಿದ ವಿಷಯ ನೆನಪಿರಲಿ. ಬಹಳ ಕಡಿಮೆ ಎಂದರೂ ನಿಮ್ಮ ಹಳ್ಳಿಯಿಂದ ಐದುನೂರು ರೂಪಾಯಿ ಬರುತ್ತದೆ ಎಂದು ನಾನು ನಂಬಿದ್ದೇನೆ'[7]. ಇಲ್ಲಿ ನಯವಾದ ಮಾತಿನಲ್ಲಿಯೇ ರೈತರಿಂದ ಕಾಣಿಕೆಯ ಸಂಚೂ ಹಾಕುವುದು ಕಂಡುಬರುತ್ತದೆ.

ಹೋರಿಯ ಮಗ ಗೋಬರ ಜುನಿಯಾಳೊಂದಿಗೆ ಮದುವೆ ಮಾಡಿಕೊಳ್ಳುವುನು. ಪಂಚರೂ ವಿಧಿಸಿದ ದಂಡವನ್ನು ಪೂರ್ತಿಯಾಗಿ ಹೋರಿ ತಾನು ವ್ಯವಸಾಯ ಮಾಡಿ ಬೆಳೆದ ದವಸಧಾನ್ಯ ಎಲ್ಲವನ್ನು ಕೊಟ್ಟು ದಂಡ ತೀರಿಸಿದನು. ತನ್ನ ಮನೆಯವರು ಊಟ ಇಲ್ಲದೆ ಬಳಲುವ ಪರಿಸ್ಥಿತಿಯಲ್ಲಿ ಮುಳುಗಿದರೂ ಅವರಿಗೆ ವರ್ಷವಿಡೀ ಹಸಿವಿನ, ಉಪವಾಸ ವ್ರತ ಕೈಗೊಳ್ಳುವಂತೆ ಹೋರಿಯಿಂದ ದಂಡವನ್ನು ಕಿತ್ತುಕೊಂಡಾಗ ರಾಯಸಾಹೇಬರು ರಿಯಾಯಿತಿ ನೀಡದೆ ಬಡವರು ಒಳ್ಳೆಯವರೆಂಬ ಕನಿಕರವನ್ನು ತೋರದೆ ತಮ್ಮ ಗುಲಾಮರಿಂದ ಹೋರಿಯ ಹಣವನ್ನು ವಶಪಡಿಸಿಕೊಳ್ಳುವನು. ಇದು ರಾಯಸಾಹೇಬನ ವ್ಯಕ್ತಿತ್ವದ ಪರಿಚಯವನ್ನು ನೀಡುತ್ತದೆ.

ರಾಯಸಾಹೇಬನು ಇನ್ನೊಬ್ಬರ ಮೂಲಕ ಹೋರಿಯನ್ನೇ ಶೋಷಣೆ ಮಾಡುವಂತದ್ದು. ಆತ್ಮೀಯತೆ ಎಂಬುದು ಕೇವಲ ತಮ್ಮ ವ್ಯವಹಾರಕ್ಕೆ ಮಾತ್ರ ಸೀಮಿತವಾದುದು. ತಮ್ಮ ಆದಾಯದ ಮೂಲಗಳಿಗೆ ಯಾವುದೇ ತೊಂದರೆ ಆಗದಂತೆ ರೈತರನ್ನು ಒಡೆಯರು ಶೋಷಣೆಗೆ ಒಳಪಡಿಸುವುದನ್ನು ಕಾಣಬಹುದಾಗಿದೆ.

ಈಗ ಆಳು ಒಡೆಯರ ಸಂಬಂಧದಲ್ಲಿ ಹೋರಿರಾಮ ರಾಯಸಾಹೇಬರ ಸಂಬಂಧ ಇಲ್ಲಿ ಕೇವಲ ಮಾತುಗಳ ರೂಪ ಪಡೆಯುತ್ತವೆಯೇ ಹೊರತು ಇಲ್ಲಿ ಶೋಷಣೆಯಂತೂ ನಿಲ್ಲುವುದಿಲ್ಲ. ಕನಿಕರ ಪಟ್ಟರೆ ರಾಯಸಾಹೇಬನ ಬೇಳೆ ಬೇಯುವುದಿಲ್ಲ. ಹಣದ ಮುಂದೆ ಹಾಗೂ ತಮ್ಮ ಸುಖದ ಮುಂದೆ ಎಲ್ಲರೂ

ಸಮಾನರು ಎಂಬ ಮನೋಭಾವದಲ್ಲಿ ಶ್ರೀಮಂತರು ರೈತರನ್ನು ಶೋಷಣೆಗೆ ಒಳಮಾಡುವಂತಹ ವಿಚಾರಗಳು ಇಲ್ಲಿ ಗೋಚರವಾಗುತ್ತವೆ. ಇವರು ಬಡವರ ಬದುಕಿನ ಬಗ್ಗೆ ಯಾವುದೇ ಚಿಂತೆಯನ್ನು ಮಾಡದೆ ತಮ್ಮ ಬದುಕನ್ನೇ ಪ್ರೀತಿಸುವುದು ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

ಹೋರಿರಾಮ ಹಾಗೂ ಬಿದುರು ವ್ಯಾಪಾರಿ ಚೌಧರಿಯ ಸಂಬಂಧ.

ಬಿದಿರು ವ್ಯಾಪಾರಿಯ ಕೈಯಿಂದಲೂ ಇಲ್ಲಿ ಮೋಸ ಹೋಗುವಂತಹದ್ದು. ತನ್ನ ಸಹೋದರನಾದ ಹೀರಾನಿಗೂ ಬಿದುರಿನಲ್ಲಿ ಪಾಲಿದ್ದು ಅವನಿಗೆ ತಿಳಿಯದಂತೆ ಹೋರಿರಾಮ ವ್ಯಾಪಾರ ಮಾಡುವನು. ಆಗ ಹೀರಾನ ಹೆಂಡತಿ ಪುನ್ನಿಯು ಇದನ್ನು ವಿರೋಧಿಸಿದಳು. ನಂತರ ಹೀರಾ ಹದಿನೈದು ರೂಪಾಯಿಗೆ ಮಾತನಾಡುತ್ತಾನೆ. ಅದರ ಆಧಾರದ ಮೇಲೆ ಚೌಧರಿಯು ಬಿದಿರು ಕಡಿಯುತ್ತಾನೆ. ಮೊದಲಿಗೆ ಚೌಧರಿಯು ಹೋರಿಯನ್ನು ಬೆಂಬಲಿಸಿ, ನಂತರದಲ್ಲಿ ಹೀರಾನ ಕಡಿಮೆ ಹಣಕ್ಕೆ ಅವನು ವ್ಯಾಪಾರ ಮಾಡುವನು. ಇಲ್ಲಿ ಬುದ್ಧಿವಂತರಾದ ಶ್ರೀಮಂತರು ತಮಗೆ ಲಾಭ ಹೇಗೆ ಬರುತ್ತದೆ ಎಂಬುದನ್ನು ಮಾತ್ರ ಗಮನಿಸುವುದು ಇಲ್ಲಿ ಸ್ಪಷ್ಟವಾಗಿ ನಿರೂಪಣೆಯಾಗಿದೆ. ಹೋರಿಗೆ ಕಡಿಮೆ ಹಣ ಸಿಕ್ಕಿದ್ದು ಎಕ್ಕಡದ ಏಟು ತಿಂದಂತೆ ಆಯಿತು. ತನ್ನ ತಮ್ಮನಿಗೆ ಗೊತ್ತಿಲ್ಲದ ಹಾಗೆ ಲಾಭ ಪಡೆದು ಮೋಸಗಾರಿಕೆಯಲ್ಲಿ ತನ್ನ ಕಾಣಿಕೆ ನೀಡಬೇಕು ಎಂದುಕೊಂಡಿದ್ದ. ಹೋರಿಯು ನಿರಾಸೆ ತುಂಬಿಕೊಂಡು ಏಳು ರೂಪಾಯಿ ಐವತ್ತು ಪೈಸೆ ತೆಗೆದುಕೊಂಡು ಸುಮ್ಮನಾಗುವನು.

ಶ್ರೀಮಂತರ ಮೋಸದ ಬಲೆ ದೊಡ್ಡದಾಗಿದ್ದು, ಅದಕ್ಕೆ ಬಡವರು ಸಿಕ್ಕಿ ಹಾಕಿಕೊಂಡು ನರಳುವಂತೆ ಹೋರಿಯು ಸ್ವಲ್ಪ ದುರಾಸೆಗೊಂಡು ಲಾಭ ಪಡೆಯುವ ಹುನ್ನಾರದಲ್ಲಿ ತಾನೇ ಶೋಷಣೆಗೆ ಒಳಗಾಗುವ ದುಃಸ್ಥಿತಿಯು ಕಾಣುತ್ತದೆ.

ಈ ರೀತಿಯ ಶೋಷಣೆಗೆ ಒಳಗಾದರೂ ಹೋರಿರಾಮನು ಯಾವುದೇ ರೀತಿಯಲ್ಲಿ ಹತಾಶೆಗೊಳ್ಳದೆ ಬದುಕನ್ನು ವ್ರತದಂತೆ ಪಾಲಿಸಿಕೊಂಡು ಬರುವುದನ್ನು ಗಮನಿಸಬಹುದು. ಪ್ರತಿಯೊಂದು ಸಮಸ್ಯೆಯನ್ನು ನಿಭಾಯಿಸಿಕೊಂಡು, ಜೀವನಕ್ಕೆ ಹೊಂದಿಕೊಂಡು ಹೋಗುವಂತದ್ದು ಹೋರಿರಾಮನ ಪಾತ್ರವಾಗಿದೆ. ಅಸಹಾಯಕತೆ ಎಂಬುವ ಸುಳಿವನ್ನು ಎಲ್ಲೂ ತೋರುಗೊಡುವುದಿಲ್ಲ. ಶೋಷಣೆಯ ನೆಲೆಯಲ್ಲಿ ಬದುಕನ್ನು ಹಾಗೂ ಸಂಸಾರವನ್ನು ನೀಗಿಸಿಕೊಳ್ಳುವ ರೈತ ಹೋರಿರಾಮನಾಗಿದ್ದಾನೆ.

ಇಲ್ಲಿನ ಸಂಬಂಧಗಳಲ್ಲಿ ಯಾವುದೇ ಅರ್ಥ ಕಾಣುವುದಿಲ್ಲ. ಕೇವಲ ವ್ಯಾಪಾರ ಲಾಭ ಎಂಬುದರ ನೆಲೆಯಲ್ಲಿ ರೈತರ ಬದುಕು ಸಾಗುತ್ತದೆ ಎಂದರೆ ತಪ್ಪಾಗಲಾರದು. ಹೋರಿರಾಮನ ಮಗ ಗೋಬರನಿಗೆ, ತನ್ನ ತಂದೆಯಾದ ಹೋರಿಯು ರಾಯಸಾಹೇಬನ ಮನೆಗೆ ಹೋಗಿ ಬರುವುದು ಸರಿಕಾಣದೆ ತಂದೆಯನ್ನು ಪ್ರಶ್ನಿಸುತ್ತಾನೆ. ಆದರೆ ಹೋರಿ ತನ್ನ ವಿರೋಧವನ್ನು ಅನಿವಾರ್ಯತೆಯನ್ನಾಗಿ ಪರಿವರ್ತಿಸಿ ಮಗನಿಗೆ ಸಮಾಧಾನ ಹಾಗೂ ಬದುಕಿನ ವಾಸ್ತವ ಚಿತ್ರಣದ ವ್ಯಾಖ್ಯಾನವನ್ನು ನೀಡುವನು.

'ದೇವರು ನಮ್ಮನ್ನು ಗುಲಾಮರನ್ನಾಗಿ ಮಾಡಿರುವಾಗ ನಮ್ಮದೇನು ನಡೆಯುತ್ತದೆ? ಸಲಾಮಿ ಕೃಪೆಯಿಂದಲೇ ಅಲ್ಲವೇ ನಾವು ಇಂದು ನಮ್ಮ ಬಾಗಿಲಲ್ಲಿ ಗುಡಿಸಲು ಹಾಕಿಕೊಂಡಿರುವುದು'[1] ಎಂದು ಉದಾಹರಣೆ ನೀಡುವನು. ಪೊರಾ ಎಂಬ ರೈತನು ತನ್ನ ಮನೆಯ ಮುಂದೆ ಗೂಟ ಹೊಡೆದಿದ್ದ. ಗುಮಾಸ್ತ ಬಂದು ಇದಕ್ಕಾಗಿ ಅವನಿಗೆ ಎರಡು ರೂಪಾಯಿ ದಂಡ ವಸೂಲಿ ಮಾಡುತ್ತಾನೆ.

ಈ ಜೀವನದಲ್ಲಿ ತಾರತಮ್ಯದ ನೀತಿಯನ್ನು ಮಾಡುವವರು ಶ್ರೀಮಂತರೂ ಮಾತ್ರ. ದೇವರು ಮನುಷ್ಯನನ್ನು ಯಾವುದೆ ತಾರತಮ್ಯವಿಲ್ಲದೆ ಸೃಷ್ಟಿಸುವನು. ಆದರೆ ಶ್ರೀಮಂತರು ತಮ್ಮ ಪ್ರತಿಷ್ಠೆಯನ್ನು 'ಕಾಪಾಡಿಕೊಳ್ಳಲು ಈ ರೀತಿಯ ತಾರತಮ್ಯವನ್ನು ಸೃಷ್ಟಿಸುವರು. ತಮ್ಮ ಸುಖದ ಜೀವನದಲ್ಲಿ ರೈತರನ್ನು ಕೀಳಾಗಿ ನೋಡುವುದು ಹಾಗೂ ಅವರನ್ನು ಶೋಷಣೆ ಮಾಡುವುದು ಅವರವರ ವ್ಯಕ್ತಿತ್ವಕ್ಕೆ ಸಲ್ಲಿದ್ದು. ಶ್ರೀಮಂತರ ಆಜ್ಞೆಯಿಲ್ಲದೆ ಬಡವ ತನ್ನ ಮುಂದಿನ ಜಾಗದಲ್ಲಿ ಏನೂ ಮಾಡುವಂತಿರಲಿಲ್ಲ. ಆ ರೀತಿ ಮಾಡಿದ್ದಲ್ಲಿ ರೈತರು ದಂಡಕ್ಕೆ ಗುರಿಯಾಗಬೇಕಾಗುತ್ತಿತ್ತು. ಆದ್ದರಿಂದ ಶ್ರೀಮಂತರ ಸಂಪರ್ಕ ಬೇಕು. ಆದರೆ ಮಾನವೀಯತೆಯೇ ಇಲ್ಲದ ಸಂಪರ್ಕದಿಂದ ಯಾವ ಲಾಭವೂ ಇಲ್ಲ ಎಂಬುದು ಹೋರಿಗೆ ಗೊತ್ತಿದ್ದರೂ ತನ್ನ ಒಂದು ಸಮಾಧಾನಕ್ಕೆ ಈ ಒಂದು ಕಾರ್ಯಕ್ಕೆ ಮುಂದಾಗುವನು.

ಗೋದಾನ ಕಾದಂಬರಿಯಲ್ಲಿ ಲೇವಾದೇವಿ ಮಾಡುವ ಸಾಹುಕಾರ ವ್ಯಕ್ತಿಗಳು ಹಳ್ಳಿಯಲ್ಲಿ ಬಡ್ಡಿ ಸಾಲವನ್ನು ರೈತರಿಗೆ ಹಾಗೂ ಹೋರಿರಾಮನಿಗೂ ನೀಡುತ್ತಿದ್ದರು. ಅದರಲ್ಲಿ ಒಬ್ಬ ಬ್ರಾಹ್ಮಣ ಮುದುಕ ದಾತಾದೀನ, ಮಂಗರೂ ಸಾಹ, ದುಲಾರಿ (ಒಬ್ಬ ವಿಧವೆ), ಝಿಂಗಾರೀ ಸಿಂಹ ಮುಂತಾದವರು. ಇವರು ಹಳ್ಳಿಯಲ್ಲಿ ವಾಸಮಾಡುವ ಎಲ್ಲಾ ರೈತರೊಂದಿಗೆ ಬಡ್ಡಿ ವ್ಯವಹಾರದ ಸಂಬಂಧವನ್ನು ಮಾತ್ರ ಹೊಂದಿದ್ದರೂ, ಪ್ರತಿಯೊಬ್ಬ ರೈತನು ಇವರ ಸಾಲ ಪಡೆಯದೇ ಇರಲು ಸಾಧ್ಯವಾಗುತ್ತಿರಲಿಲ್ಲ. ದುಡಿದ ಎಲ್ಲಾ ಫಸಲು ಇವರನ್ನು ಸೇರುತ್ತಿತ್ತು. ಮತ್ತೆ ಇವರಿಂದಲೇ ಸಾಲ ಪಡೆದು ಜೀವನ ಸಾಗಿಸುವುದು. ಇದು ಚಕ್ರದಂತೆ ನಡೆಯುತ್ತಿತ್ತು. ಬಡವರಿಗೆ, ರೈತರಿಗೆ ಸಾಲ ಕೊಟ್ಟು ಬಡ್ಡಿಗೆ ಬಡ್ಡಿ ಸೇರಿಸಿ ದೊಡ್ಡ ಹೊರೆಯಾಗಿ ಮಾಡಿ ರೈತರನ್ನು ನಿರ್ಗತಿಕರನ್ನಾಗಿ ಮಾಡುತ್ತಿದ್ದರೂ ಇವರು ಒಂದು ರೂಪಾಯಿಗೆ ಒಂದಾಣೆ ಬಡ್ಡಿಯಂತೆ ಸಾಲ ನೀಡುತ್ತಿದ್ದರು. ಅದೇ ರೀತಿಯಾಗಿ ಸಾಲ ಕೊಟ್ಟ ಮೇಲೆ ಪತ್ರ ಬರೆಸಿಕೊಳ್ಳುವಂತಹ ಕ್ರಮವನ್ನು ಸಹ ಹೊಂದಿದ್ದರು. ಹಳ್ಳಿಯ ರೈತರೆಲ್ಲ ಇವರ ಬಡ್ಡಿ ಕಟ್ಟುವುದರ ಒಳಗೆ ತಮ್ಮ ಆಸ್ತಿಪಾಸ್ತಿ ಕಳೆದುಕೊಳ್ಳುತ್ತಿದ್ದರು. ನಂತರ ಕೂಲಿಗಳಂತೆ ಕೆಲಸಕ್ಕೆ ಹೋಗುತ್ತಿದ್ದರು. ಇನ್ನೂ ಕೆಲವರು ಪ್ರಾಣವನ್ನೆ ಬಿಡುವ ಸ್ಥಿತಿಗೆ ತಲುಪುವ ಹಾಗೇ ಇವರ ಒಂದು ಶೋಷಣೆ ರೈತರ ಮೇಲೆ ನಡೆಯುತ್ತಿತ್ತು. ಈ ಲೇವಾದೇವಿಯವರಿಂದ ಸಾಲ ಪಡೆದ ಮೇಲೆ ಅವರ ಜೀವನ ಪೂರ್ತಿ ಬಡ್ಡಿ ಕಟ್ಟುವ ಕೆಲಸದಲ್ಲಿ ನಿರತರಾಗುತ್ತಿದ್ದರು. ಅಲ್ಲದೆ ದುಡಿದ ಫಸಲಿನ ಹಣವು ಅವರ ಕೈಗೆ ಬಂದ ಕೂಡಲೇ ಅದನ್ನು ಅವರ ಕೈಯಿಂದ

ನಿರ್ದಾಕ್ಷಿಣ್ಯವಾಗಿ ಕಿತ್ತುಕೊಳ್ಳುವುದನ್ನು ಕಾಣಬಹುದು. ರೈತರು ಏನು ಮಾತನಾಡುವಂತಿಲ್ಲ, ವಿರೋಧಿಸುವಂತಿಲ್ಲ. ಹಾಗೆ ಮಾಡಿದರೆ ಅವರಿಗೆ ಪೊಲೀಸ್ ಸ್ಟೇಷನ್ ಎಂಬ ಭಯದ ಕಲ್ಪನೆ ಮೂಡಿಸಿ ಅವರನ್ನು ಶೋಷಣೆ ಮಾಡುತ್ತಾರೆ. ರೈತರು ತಾವು ದುಡಿದ ಎಲ್ಲ ಹಣವನ್ನು ಹಾಗೂ ಧಾನ್ಯವನ್ನು ಕೊಟ್ಟರೆ ಅವರ ಅವನ ಗತಿ ಏನು? ಅವನ ಉಪವಾಸ ವ್ರತ ಮಾಡಬೇಕಾಗಿ ಬರುತ್ತದೆಯಲ್ಲ, ಅವನ ಸಂಸಾರದ ಗತಿ ಏನು? ಎಂಬ ಸೂಕ್ಷ್ಮಜ್ಞಾನ ಇಲ್ಲದೆ ತಮಗೆ ಬರಬೇಕಾಗಿದ್ದ ಹಣವನ್ನು ಇವರೆಲ್ಲ ಸೇರಿ ತಮ್ಮ ತಮ್ಮ ಲೆಕ್ಕ ಜಮಾ ಮಾಡಿಕೊಳ್ಳುವರೇ ಹೊರತು ರೈತನ ನೋವು, ಸಂಕಟ, ಹಸಿವು ಯಾವುದು ಶ್ರೀಮಂತರ ಕಣ್ಣಿಗೆ ಯಾವತ್ತೂ ಕಾಣುವುದಿಲ್ಲ ಎಂಬುದಕ್ಕೆ ಮೇಲಿನ ಸನ್ನಿವೇಶವು ಒಂದು ಸ್ಪಷ್ಟ ಕನ್ನಡಿಯಾಗಿದೆ.

ಮನುಷ್ಯರನ್ನು ಕಿತ್ತು ತಿನ್ನುವ ನರಹದ್ದುಗಳಂತೆ ರೈತರ ಶ್ರಮವನ್ನು ಕಿತ್ತುಕೊಂಡು ಬದುಕುವ ಶ್ರೀಮಂತರು. ಇವರು ಮಾನವೀಯತೆಯ ಅಂಶಗಳನ್ನು ತಿಳಿಯದೆ ವ್ಯವಹರಿಸುವ ಹಾಗೂ ಇವರ ಸ್ವಾರ್ಥದ ನಿಟ್ಟಿನಲ್ಲಿಯೇ ಸಾಗುವ ಶ್ರೀಮಂತರು ರೈತರನ್ನು ಶೋಷಣೆ ಮಾಡುವುದು ಕಂಡುಬರುತ್ತದೆ.

ರೈತರ ಜಾನುವಾರಗಳಿಗೆ ಬೂಸಾ ಮುಗಿದು ಹೋಗಿತ್ತು. ಕಬ್ಬಿನ ನಡುವೆ ಕಳ್ಳತನದಿಂದ ಗೋದಿ ಹಾಕಿಕೊಂಡು ಅದನ್ನೇ ಚೂರು ಚೂರು ಮಾಡಿ ದನಕರುಗಳಿಗೆ ಹಾಕುತ್ತಿದ್ದರು. ಬಿತ್ತನೆಯ ಕೆಲಸವನ್ನು ಪ್ರಾರಂಭ ಮಾಡಬೇಕಾದರೆ ಮುಂಗಾರು ಮಳೆ ಇಲ್ಲದೆ ರೈತರು ಆಕಾಶದತ್ತ ನೋಡುತ್ತಿದ್ದರು. ದೇವರ ಹತ್ತಿರ ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದರು. ಮುಂಗಾರು ಮಳೆ ಬೀಳಲು ರೈತರು ಸಂತೋಷದಲ್ಲಿ ಬಿತ್ತನೆ ಮಾಡಲು ಮುಂದಾಗುವರು. ಈ ಸಂದರ್ಭದಲ್ಲಿ ಸಿಡಿಲಿನಂತೆ ಒಂದು ವಿಷಯ ಕಾರಕೂನ ಎಂಬ ರಾಯಸಾಹೇಬರ' ಗುಲಾಮನ ಕೈಯಿಂದ ಒಂದು ಆಜ್ಞೆ ಹೊರಟಿತ್ತು. ಅದು, ಬಾಕಿ (ಹಣ) ಗೇಣಿ ಹಣವನ್ನು ತೀರಿಸುವವರೆಗೂ ಯಾರೂ ಗದ್ದೆಗೆ ನೇಗಿಲು ತೆಗೆದುಕೊಂಡು ಹೋಗಬಾರದು ಎಂಬುದಾಗಿತ್ತು. ರೈತರು ಗಾಬರಿಯಿಂದ ತಲೆಯ ಮೇಲೆ ಕೈ ಇಟ್ಟುಕೊಂಡು ಕುಳಿತರು. ರೈತರು ಆತಂಕದಿಂದ 'ನಾವು ಹಳ್ಳಿ ಬಿಟ್ಟು ಓಡಿಹೋಗುವುದಿಲ್ಲ. ಹೊಲಕ್ಕೆ ನೇಗಿಲು ಒಪ್ಪಿಸದಿದ್ದರೆ ಹಣ ಎಲ್ಲಿಂದ ಬರಬೇಕು ಎಂದು'[3] ತಾವು ತಾವೇ ಮಾತಾಡಿಕೊಂಡರು.

ರಾಯಸಾಹೇಬನ ಭಂಟನಾದ ಕಾರಕೂನನ ಹೆಸರು ಗೋಸೇರಾಮ. ಇವನ ಹತ್ತಿರ ರೈತರು ಗೋಳು ತೋಡಿಕೊಂಡರೂ ರಾಯಸಾಹೇಬರ ಹುಕ್ಕುಂ ಮೀರುವಂತಿರಲಿಲ್ಲ. ಹೋರಿರಾಮನ ಹತ್ತಿರ ಇವರೇ ಎಂತಹ ದಯೆ ಹಾಗೂ ಧರ್ಮದ ಮಾತನಾಡಿದರು. ಆದರೆ ಈಗ ರೈತನ ಮೇಲೆ ಅತ್ಯಾಚಾರ ಮಾಡಲು ಹೊರಡುವ ಶ್ರೀಮಂತರ ದೌರ್ಜನ್ಯವಾಗಿದೆ.

ವ್ಯವಸಾಯದಿಂದಲೇ ರೈತನ ಬದುಕು. ಆದರೆ ಈ ರೀತಿ ಮಾಡಿದರೆ ರೈತನ ಹೊಟ್ಟೆಪಾಡಿನ ಗತಿ ಏನು ಎನ್ನುವ ಪ್ರಶ್ನೆಯನ್ನು ಯೋಚಿಸಿದೆ ರೈತರು ಸಾಲ

ಮಾಡಿಯಾದರೂ, ಪ್ರಾಣ ಒತ್ತೆ ಇಟ್ಟಾದರೂ ಗೇಣಿ ತೀರಿಸಲೇಬೇಕು ಎಂಬುದು ಶ್ರೀಮಂತರ ಉದ್ದೇಶವಾಗಿದೆ. ಹೀಗೆ ರೈತರ ತೇಜೋವಧೆ ನಡೆಸುವುದನ್ನು ಗಮನಿಸಬಹುದು.

ಈ ಸಂದರ್ಭದಲ್ಲಿ ರೈತರು ಗಾಬರಿಯಿಂದ ಮಂಗರೂ ಸಾಹುವಿನ ಹತ್ತಿರ ಹೋಗಿ ಸಾಲ ಕೇಳಿದರು. ಆದರೆ ಇವನು ಒಂದು ರೂಪಾಯಿಗೆ ಎರಡು ಆಣೆಯಂತೆ ಸಾಲ ನೀಡುವನು. ಅಲ್ಲದೆ ಕಾಗದ ಬರೆಸಿಕೊಳ್ಳದೇ ಯಾರಿಗೂ ಸಾಲ ಕೊಡುತ್ತಿರಲಿಲ್ಲ. ಇದು ಅವನ ಸ್ವಭಾವವಾಗಿತ್ತು. ಅದರಿಂದ ಮತ್ತಷ್ಟು ರೈತರನ್ನು ಶೋಷಣೆ ಮಾಡುವುದಾಗಿದೆ.

ಗಿರಿಧರ ಎಂಬ ಬಡರೈತನ ಮೇಲೆ ಎಲ್ಲ ಸಾಲಗಾರರು ದಾಳಿಮಾಡಿ ಎಲ್ಲವನ್ನೂ ಕಿತ್ತುಕೊಳ್ಳುವರು. ಆಗ ಅವನು ಒಂದು ಆಣೆಯನ್ನು ಬಾಯಿಯಲ್ಲಿ ಅಡಗಿಸಿಕೊಂಡು ಅದಕ್ಕೆ ಕಳ್ಳು ಕುಡಿದು ತೂರಾಡುವನು. ಆದರೆ ಅವನಿಗೆ ಒಂದು ಆಣೆಯಲ್ಲಿ ಕುಡಿದರೆ ನಸೆ ಏರುತ್ತಿರಲಿಲ್ಲ. ಹೀಗೆ ಅವನು ನಟಿಸಲು ಕಾರಣ, ವರ್ಷ ಪೂರ್ತಿ ಶ್ರಮಪಟ್ಟು ಬೆವರು ಸುರಿಸಿದ ಹಣವನ್ನೆಲ್ಲಾ ಕಿತ್ತುಕೊಳ್ಳುವರು. ಅದನ್ನು ಮರೆಯಲು ತನ್ನ ಸಂಸಾರವು ವರ್ಷ ಪೂರ್ತಿಯಾಗಿ ಉಪವಾಸ ವ್ರತ ಕೈಗೊಳ್ಳಬೇಕಾಗುತ್ತದೆ. ಹಾಗೂ ಜನ ನನ್ನನ್ನು ಕುಡಿದಿದ್ದಾನೆ ಎಂದು ತಿಳಿದುಕೊಂಡು ಸುಮ್ಮನಿರುವರು ಎಂದು ನಾಟಕವನ್ನು ಮಾಡುವನು. ಭಾರತದ ರೈತನ ಈ ರೀತಿಯ ಪರಿಸ್ಥಿತಿಯ ಧಾರುಣವಾದ ಸಂಗತಿಗಳನ್ನು 'ಗೋದಾನ' ಕಾದಂಬರಿಯು ನಿರೂಪಿಸಿದೆ.

ಹೀಗೆ ಇಡೀ ಲೇವಾದೇವಿ ಮಾಡುವವರು ರೈತರನ್ನು ತಮ್ಮ ಮನಸಾ ಇಚ್ಛೆ ಶೋಷಣೆಗೆ ಒಳಪಡಿಸಿ ಅವರ ಬದುಕನ್ನು ಮರುಭೂಮಿಯಂತೆ ಮಾಡುವರು. ರೈತರ ಊಟ, ವಸತಿ, ನೆಮ್ಮದಿ, ಸಂತೋಷ ಎಲ್ಲವನ್ನೂ ಶ್ರೀಮಂತರೂ, ಸಾಲಗಾರರೂ ಕಿತ್ತುತಿಂದರೆ ಬಡವರು ಯಾವ ರೀತಿಯಲ್ಲಿ ಬದುಕು ಸಾಗಿಸಬೇಕಾಗುತ್ತದೆ ಎಂಬುದೇ ದೊಡ್ಡ ಪ್ರಶ್ನೆಯಾಗಿ ಎದುರಾಗುತ್ತದೆ.

ಹೋರಿರಾಮ ಹಾಗೂ ಲೇವಾದೇವಿ (ಬಡ್ಡಿ ಸಾಲಗಾರರ) ಮಾಡುವವರ ನಡುವಿನ ಸಂಬಂಧವೂ ಸಹ ಈ ಕಾದಂಬರಿಯಲ್ಲಿ ನಿರೂಪಿತವಾಗಿದೆ. ಹೋರಿರಾಮ ಹಾಗೂ ಇವರೊಡನೆ ಜಾತಿ ಸಂಬಂಧವಿದ್ದರೂ ಇಲ್ಲಿ ವ್ಯವಹಾರದ ಮುಂದೆ ಯಾವುದೂ ಲೆಕ್ಕಕ್ಕೆ ಬರುವುದಿಲ್ಲ. ಇವರಿಗೆ ಕೇವಲ ಬಡ್ಡಿಗೆ ಬಡ್ಡಿ ಹಾಗೂ ತಮ್ಮ ಸಾಲವನ್ನು ಜಮಾಮಾಡಿಕೊಳ್ಳುವುದೊಂದೇ ಪ್ರಮುಖ ಉದ್ದೇಶವಾಗಿದೆ.

ಹೋರಿರಾಮನ ತಂದೆ-ತಾಯಿ ಇಬ್ಬರೂ ಮರಣ ಹೊಂದಿದ ಮೇಲೆ ತಮ್ಮಂದಿರ ಪೋಷಣೆಯ ಜವಾಬ್ದಾರಿಯನ್ನು ಹೊತ್ತು ಸಾಲ ಮಾಡದೇ ಬದುಕನ್ನು ನಿಭಾಯಿಸಲು ಅವನಿಗೆ ಸಾಧ್ಯವಾಗಲಿಲ್ಲ. ತನ್ನ ಸಂಸಾರವನ್ನು ನಿಭಾಯಿಸಲು ತಮ್ಮ ಶ್ರಮದ ಜೊತೆಗೆ ಇವರ ಬಡ್ಡಿ ಸಾಲವು ಅತ್ಯವಶ್ಯಕವಾಗಿ ಬೇಕಾಗಿ ಬಂದದಕ್ಕೆ ಹೋರಿಯೂ ಇವರ ಶೋಷಣೆಯಲ್ಲಿ ಮುಳುಗುವನು.

೧. ಹೋರಿರಾಮ ಮತಾದೀನನ ಹತ್ತಿರ ಮೂವತ್ತು ರೂಪಾಯಿ ಸಾಲ ಮಾಡಿ, ಆಲೂಗಡ್ಡೆ ಬಿತ್ತಿದ್ದ. ಆದರೆ ಹೋರಿಯ ದುರಾದೃಷ್ಟ ಕಳ್ಳರು ಎಲ್ಲವನ್ನೂ ಕಿತ್ತುಕೊಂಡು ಹೋಗಿ ಬಿಟ್ಟಿದ್ದರು. ಮೂವತ್ತು ರೂಪಾಯಿ ಒಂದು ವರ್ಷದಲ್ಲಿ ನೂರು ರೂಪಾಯಿಯಾಗಿತ್ತು.

೨. ಮತಾದೀನ ಎಂಬುವನು ಬ್ರಾಹ್ಮಣ ಮುದುಕ. ಹಳ್ಳಿಯಲ್ಲಿ ಎಲ್ಲರಿಗೂ ನ್ಯಾಯ ತೀರ್ಮಾನ ಮಾಡುತ್ತಿದ್ದ ಹಾಗೂ ಈತ ಪಂಡಿತನಾಗಿದ್ದ. ಈತನು ತನ್ನ ಸ್ವಾರ್ಥಕ್ಕಾಗಿ ಇತರರನ್ನು ಶೋಷಣೆ ಮಾಡುವುದೆ ಈತನ ಗುರಿಯಾಗಿತ್ತು.

ಹೋರಿರಾಮ ಮಂಗರುವಿನಿಂದ ಎತ್ತಿಗಾಗಿ ಅರವತ್ತು ರೂಪಾಯ ಸಾಲ ತೆಗೆದುಕೊಂಡಿದ್ದ. ಸಾಲ ಪಡೆದು ಐದು ವರ್ಷಗಳಲ್ಲಿ ಅದು ನೂರ ಇಪ್ಪತ್ತು ಆಗಿತ್ತು. ಅದರಲ್ಲಿ ಅರವತ್ತು ರೂಪಾಯಿ ಕೊಟ್ಟಿದ್ದ. ದುಲಾರಿ ಎಂಬುವಳು ವಿಧವೆ. ಇವಳು ಲೇವಾದೇವಿ ಮಾಡುತ್ತಿದ್ದಳು. ಅಲ್ಲದೆ ಹಳ್ಳಿಯಲ್ಲಿ ಉಪ್ಪು, ಎಣ್ಣೆ, ಹೊಗೆಸೊಪ್ಪಿನ ಅಂಗಡಿ ಇಟ್ಟುಕೊಂಡಿದ್ದಳು. ಹೋರಿರಾಮ ತಮ್ಮಂದಿರ ಜೊತೆಗೆ ಪಾಲಾಗುವ ಸಮಯದಲ್ಲಿ ಅವಳಿಂದ ನಲವತ್ತು ರೂಪಾಯಿ ಸಾಲ ಪಡೆದಿದ್ದ. ಅದು ಸುಮಾರು ನೂರು ರೂಪಾಯಿ ಆಗಿತ್ತು. ಇವಳು ಒಂದು ರೂಪಾಯಿಗೆ ಒಂದಾಣೆ ಬಡ್ಡಿಯಂತೆ ಸಾಲವನ್ನು ಕೊಡುತ್ತಿದ್ದಳು. ಇದಲ್ಲದೆ ಹೋರಿರಾಮನು ಅವಳ ಹತ್ತಿರ ಇಪ್ಪತ್ತೈದು ರೂಪಾಯಿ ಗೇಣಿಯ ಬಾಕಿಯನ್ನು ಉಳಿಸಿಕೊಂಡಿದ್ದ. ಹೀಗೆ ಎಲ್ಲರ ಹತ್ತಿರ ಸಾಲದ ಹೊರೆಯನ್ನು ಹೋರಿರಾಮ ಹೊತ್ತುಕೊಂಡಿದ್ದ.

ನಮ್ಮ ರೈತರಿಗೆ ಸಾಲ ಎಂಬುದು ಮನೆಗೆ ಬಂದು ಹೋಗದೇ ಇರುವ ಅತಿಥಿಯಂತೆ. ಒಂದು ಸಾರಿ ಸಾಲ ಮಾಡಿದರೆ ಅದು ಜೀವ ಇರುವ ತನಕ ಬಡ್ಡಿ ಕಟ್ಟುವುದರಲ್ಲಿಯೇ ಆಗುತ್ತದೆ. ಇವರೆಲ್ಲರೂ ಕುಲಬಾಂಧವರ ಸಂಬಂಧ ಹೊಂದಿದ್ದರು. ಹೋರಿರಾಮ ಇವರಿಂದಲೂ ಹೆಚ್ಚು ಶೋಷಣೆಗೆ ಒಳಗಾಗುವನು.

ಇವರ ಹತ್ತಿರ ಸಾಲ ತೆಗೆದುಕೊಂಡ ಮೇಲೆ ಹೋರಿಯ ಬದುಕು ಮತ್ತಷ್ಟು ತೊಂದರೆಗಳಿಗೆ ಈಡಾಯಿತು. ಸಾಲ ಕೊಟ್ಟವರು ಹೋರಿಯ ವರ್ಷಪೂರ್ತಿಯಾಗಿ ದುಡಿದ ಧಾನ್ಯವನ್ನು ಕಣದಲ್ಲಿಯೇ ಲೇವಾದೇವಿಯವರು ತಮ್ಮ ತಮ್ಮ ಪಾಲು ಕಿತ್ತುಕೊಂಡು ಹೋದರು. ಎಲ್ಲ ಹೋಗಿ ಹೋರಿಗೆ ಐದು ಸೇರು ಧಾನ್ಯ ಮಾತ್ರ ಉಳಿಯಿತು. ಇದರಿಂದ ತಮ್ಮ ಸಂಸಾರವನ್ನು ಹೇಗೆ ನಿಭಾಯಿಸಬೇಕು ಎಂದು ಅವನು ಯೋಚಿಸುವನು. ಇಲ್ಲಿ ಒಬ್ಬ ಜಮೀನ್ದಾರ ಒಬ್ಬನೆ. ಆದರೆ ಸಾಲ ಕೊಟ್ಟವರು ಮೂರು ಮೂರು ಜನ. ಅವರೆಲ್ಲ ಬಡ್ಡಿಯನ್ನು ತೀರಿಸಲಾಗುವುದಿಲ್ಲ ಎಂಬ ಚಿಂತೆಯಲ್ಲಿ ಹೋರಿರಾಮ ಮುಳುಗುವನು. ಇದು ಸಾಲದು ಎಂಬಂತೆ ಮುಂದಿನ ಬದುಕು ಸಾಗಲು ಇವರೇ ಸಾಲ ಕೊಡಬೇಕಾದ ಪರಿಸ್ಥಿತಿ ಎದುರಾಗುವುದು.

ಹೋರಿಯ ಜೀವನವು ಒಂದು ದುರಂತವೇ ಸರಿ. ಬಡವರ ಬದುಕು ಎಂದರೆ ಬರೀ ನೋವಿನ ಕಂತೆ ಎಂದರೂ ತಪ್ಪಾಗಲಾರದು. ಬಡವರು ಹುಟ್ಟಿರುವುದೇ ಇವರ

ರಕ್ತ ಹರಿಸಿ ದೊಡ್ಡವರ ಮನೆ ತುಂಬುವುದಕ್ಕೆ ಎಂಬ ಭಾವದಲ್ಲಿ ಬಡವರು ಬದುಕನ್ನು ನಿಭಾಯಿಸಲೇಬೇಕಾಗುತ್ತದೆ. ಅಷ್ಟೊಂದು ಕ್ರೂರವಾಗಿ ಅವರು ಶೋಷಣೆಗೆ ಒಳಗಾಗುವರು[೪].

ಶ್ರೀಮಂತರು ಎಂದರೆ ಮನುಷ್ಯರು ಅನಿಸಿಕೊಳ್ಳಲು ಹಣ, ಅಧಿಕಾರ, ಬಲ, ವಿದ್ಯೆ ಯಾರಲ್ಲಿ ಇದೆಯೋ ಅವರೇ ಮನುಷ್ಯರು. ಬಡವರು ಮನುಷ್ಯರಲ್ಲ ಎಂಬ ಅಂಶವು ಹಾಗೂ ದುಡಿಯುವುದಕ್ಕೆ ಮಾತ್ರ ಇವರು ಜನ್ಮ ತಾಳಿದಂತೆ ಇದೆ ಎನ್ನಬಹುದಾಗಿದೆ.

ಹೋರಿರಾಮ ನೋವನ್ನು ಪಡುತ್ತಲೇ ತನ್ನ ಮನಸ್ಸಿನ ಮಾತುಗಳನ್ನು ಈ ರೀತಿ ಹೇಳುವನು. 'ನನ್ನ ಕೈಗೆ ಒಂದು ಪುಡಿಗಾಸು ಬಂದರೂ ಹಳ್ಳಿಯಲ್ಲಿ ಗುಲ್ಲೆದ್ದು ಬಿಡುತ್ತದೆ. ಹಾಗೂ ಸಾಲ ಕೊಟ್ಟವರು ಬಂದು ನಾಲ್ಕು ಕಡೆಯಿಂದ ಕಿತ್ತು ತಿನ್ನಲಾರಂಭಿಸುತ್ತಾರೆ' ಎಂದು ನೊಂದುಕೊಳ್ಳುವನು. ಸಾಲ ಕೊಟ್ಟವರ ಒಂದೊಂದು ಕಾಸು ತೀರಿಸಿಬಿಡೋಣವೆಂದುಕೊಂಡರೂ ಅವನು ವರ್ಷಪೂರ್ತಿ ಶ್ರಮ ಬಿದ್ದು ಬೆವರು ಸುರಿಸಿದರೂ ಇದರಿಂದ ಮುಕ್ತನಾಗಲು ಸಾಧ್ಯವಾಗುತ್ತಿರಲಿಲ್ಲ. ಅದರಲ್ಲಿಯೇ ನೊಂದುಬೆಂದು ಪಾಶ್ಚಾತ್ತಾಪ ಪಡದೇ ಅಸಹಾಯಕತೆಯಿಂದ ಬದುಕನ್ನು ನಿಭಾಯಿಸುತ್ತಿದ್ದನು.

ಹೋರಿರಾಮನ ಈ ತೊಂದರೆಯಿಂದ ಬಡ್ಡಿಕಟ್ಟಲಾಗದೆ ಕೊನೆಗೆ ಮನೆ, ಮಠ ಕಳೆದುಕೊಂಡು ಭಿಕ್ಷೆ ಬೇಡುವ ಸಂದರ್ಭ ಎದುರಾಗುವುದೇ ಎಂಬ ಸಂಶಯ ಬಡವನದು. ತನ್ನ ಮಕ್ಕಳಿಗೆ ತನ್ನಿಂದ ಇದ್ದಾಗಲು ಸತ್ತ ಮೇಲೂ ತೊಂದರೆಯೇ ಗತಿ ಎಂದು ಚಡಪಡಿಸುತ್ತಾನೆ.

ಹೋರಿ ತನ್ನ ಅಳಲನ್ನು ತೋಡಿಕೊಳ್ಳಲು ಝಿಂಗಾರೀ ಸಿಂಹನ ಮೊರೆಹೋಗುವನು. ಅವನಿಂದ ಗೇಣಿ ಕಟ್ಟಲು ಸಾಲ ಪಡೆದುಕೊಂಡು ತೀರಿಸಬೇಕಾಗುತ್ತದೆ. ಆಗ ಅವನ ಕೈಯಲ್ಲಿ ಬೈಯಿಸಿಕೊಂಡು ಹೋರಿರಾಮನು ನಿಂತಿದ್ದನು. ಈತನು ಬಹಳ ಕಠೋರವಾಗಿ ವರ್ತಿಸುತ್ತಿದ್ದ. ಒಂದು ಕಾಸು ಬಡ್ಡಿಯನ್ನು ಬಿಡುತ್ತಿರಲಿಲ್ಲ. ಹಾಗೂ ಸಮಯಕ್ಕೆ ಸರಿಯಾಗಿ ಹಣ ತೆಗೆದುಕೊಳ್ಳದೇ ರೈತರ ಮನೆ ಬಾಗಿಲಿನಿಂದ ಕಾಲ್ತೆಗೆಯುತ್ತಿರಲಿಲ್ಲ. ಸಿಂಹನ ಬಗ್ಗೆ ಎಲ್ಲಾ ವಿಷಯ ಗೊತ್ತಿದ್ದರೂ ಹೋರಿ ಅವರ ಹತ್ತಿರ ಹಣ ಕೇಳಲು ಹೋಗುತ್ತಾನೆ. ಹೋರಿರಾಮನಿಗೆ ಹಣದ ಅವಶ್ಯಕತೆ ತುಂಬಾ ಇತ್ತು.

ಝಿಂಗಾರಿ ಸಿಂಹ ಯಾವುದೇ ವಸ್ತುವನ್ನು ಅಡ ಇಡದೇ ಹಣ ನೀಡುವುದಿಲ್ಲ ಎಂದು ಹೋರಿಗೆ ಹೇಳುವನು. ಅತ್ಯಂತ ಪ್ರೀತಿಯಿಂದ ಸಾಕಿದ ಹಸುವನ್ನು ಗಿರಿವಿ ಇಡು ನಂತರ ಹಣ ತೆಗೆದುಕೊಂಡು ಹೋಗು ಎಂದು ಹೇಳುವನು. ಹೋರಿಗೆ ಮನಸ್ಸಿಲ್ಲದಿದ್ದರೂ ಮನೆಗೆ ಹೋಗಿ ಹೆಚಿಡತಿಯ ಸಲಹೆ ಕೇಳಿ ಹಸುವನ್ನು ನೀಡಲು ಮುಂದಾದರೂ ತನ್ನ ಮಕ್ಕಳು ಹಸುವನ್ನು ತುಂಬ ಪ್ರೀತಿಯಿಂದ ಕಾಣುತ್ತಿದ್ದರು. ಅದರ

ಮೇಲೆ ಪ್ರಾಣವೇ ಇರಿಸಿಕೊಂಡಿದ್ದರೂ ಇವನ ಚಿಕ್ಕ ಮಗಳು ರೂಪ ಅದರ ಜೊತೆಯಲ್ಲಿ ಅತ್ಯಂತ ಆತ್ಮೀಯ ಸಂಬಂಧ ಹೊಂದಿದ್ದಳು. ಅದರಿಂದ ಅವರು (ಮಲಗಿದ ನಂತರ) ನಿದ್ದೆ ಮಾಡಿದ ಮೇಲೆ ಹಸು ನೀಡಲು ನಿರ್ಧರಿಸುವನು. ಆದರೆ ಹಸು ಕಟ್ಟುವುದು ಹೋರಿಯ ದೊಡ್ಡ ಕನಸು. ಆದರೆ ಅದು ಬಂದು ಸ್ವಲ್ಪ ದಿನಗಳು ಆಗಿರಲಿಲ್ಲ. ಆದರೆ ಶ್ರೀಮಂತರ ಕಣ್ಣು ಬಡವರ ಮನೆಯಲ್ಲಿ ಯಾವ ವಸ್ತು ಕಣ್ಣಿಗೆ ಬೀಳುವುದೋ ಅದನ್ನೆ ತಮ್ಮ ವಶಕ್ಕೆ ತೆಗೆದುಕೊಳ್ಳಲು ರೈತರ ಸಮಸ್ಯೆಗಳನ್ನೇ ಉಪಯೋಗಿಸಿಕೊಳ್ಳುವರು. ಅದೇ ರೀತಿ ಝಿಂಗಾರಿ ಸಹ ಹಸುವನ್ನು ಕಿತ್ತುಕೊಳ್ಳಲು ಪ್ರಯತ್ನಿಸುವನು.

ಹೋರಿರಾಮನನ್ನು ಲೇವಾದೇವಿ ಮಾಡುವವರಲ್ಲದೆ ಊರಿನ ಪಂಚರಾದ ಪಟೇಶ್ವರಿ, ದರೋಗ, ನೋಖೇರಾಮ ಇನ್ನಿತರ ಶ್ರೀಮಂತ ಕುಟುಂಬದವರು ಸಹ ಹೋರಿಯನ್ನು ಶೋಷಣೆ ಮಾಡುವಂತವರಾಗಿದ್ದಾರೆ.

ಹೋರಿರಾಮ ತನ್ನ ಒಂದು ಕುಟುಂಬದ ಜೀವನ ಸಾಗಿಸಲು ಮೂರು ಎಕರೆ ಗದ್ದೆ, ವಾಸ ಮಾಡಲು ಮನೆ ಹಾಗೂ ಎರಡು ಎತ್ತುಗಳನ್ನು ಹೊಂದಿದ್ದನು. ಅಲ್ಲದೆ ತನ್ನ ಮನೆಯಲ್ಲಿ ಒಂದು ಹಸುವನ್ನು ಕಟ್ಟಬೇಕು ಎಂಬುದು ಈತನ ಒಂದು ದೊಡ್ಡ ಕನಸಾಗಿತ್ತು. ಹಸುವಿನ ಬಗ್ಗೆ ಶ್ರದ್ದೆ, ಭಕ್ತಿ ಸಹ ಇತ್ತು. ತನ್ನ ಅಷ್ಟೂ ಸಾಲದಲ್ಲಿ ಭೋಲಾನ ಹತ್ತಿರ ಒಂದು ಹಸುವಿನ ಮೇಲೆ ಮನಸೋತು ಹಣವನ್ನು ಮುಂದಿನ ಸಾರಿ ಬೆಳೆಯಲ್ಲಿ ಉಳಿಸಿಕೊಡುವುದಾಗಿ ಹಸುವನ್ನು ಅತ್ಯಂತ ಅಕ್ಕರೆಯಿಂದ ಮನೆಗೆ ಗೋಬರ ಕರೆತರುವನು. ಹಸು ಮನೆಗೆ ಬಂದಿದ್ದೆ ತಡ ಊರಿನ ಜನರೆಲ್ಲ ನೋಡಲು ಬಂದರು ಹಾಗೂ ಶ್ರೀಮಂತರ ಮನಸ್ಸಿನಲ್ಲಿ ಅಸೂಯೆಯು ಬೆಳೆಯಿತು. ಇದು ಸಾಲದು ಎಂಬಂತೆ ತನ್ನ ತಮ್ಮನಾದ ಹೀರಾ ಹಾಗೂ ಶೋಭಾ ಇಬ್ಬರು ತನ್ನ ಅಣ್ಣನ ತನ್ನ ಮೋಸದ ಬಗ್ಗೆ ಅವರಿಗೆ ಊಟ, ಬಟ್ಟೆಗೆ ಸರಿಯಾಗಿ ನೋಡಿಕೊಳ್ಳದೆ ಉಳಿಸಿದ ಹಣದಲ್ಲಿ ಹಸು ತಂದಿದ್ದಾನೆ ಎಂಬ ಮಾತುಗಳು ಹೋರಿಯ ಕಿವಿಗೆ ಬೀಳತೊಡಗಿದವು. ಹೋರಿಗೆ ಪ್ರೀತಿಯಿಂದ ತಂದು ಮನೆ ತುಂಬಿಸಿಕೊಂಡ ಹಸು ಆ ಕ್ಷಣ ಅವನಿಗೆ ಒಂದು ಶಾಪದಂತೆ ತೋರಿತು. ಹಸುವನ್ನು ಹಿಂದಿರುಗಿಸಲು ಯತ್ನಿಸಿದಾಗ ಹೋರಿಯ ಹೆಂಡತಿ ಧನಿಯಾ, ಮಗ ಗೋಬರ ಹಾಗೂ ಸೋನ ರೂಪ ಎಲ್ಲರೂ ಇದಕ್ಕೆ ವಿರೋಧ ವ್ಯಕ್ತಪಡಿಸುವರು. ಇದರಿಂದ ಹೀರಾಗೂ ಧನಿಯಾಳಿಗೂ ತುಂಬ ವಾದವಿವಾದಗಳು ನಡೆಯುತ್ತವೆ. ನಂತರ ಊರಿನ ಶ್ರೀಮಂತರೂ ಸಹ ಹೋರಿಯ ಹತ್ತಿರ ಹಣ ಇದೆ. ಹಸು ಕೊಳ್ಳಲು ಹಣ ಎಲ್ಲಿಂದ ಬಂತು. ಹಾಗೂ ಸಾಲ ಕಟ್ಟದೆ ಮನೆಗೆ ಹಸು ತಂದದ್ದು ದಾತಾದೀನ ಹಾಗೂ ಇನ್ನುಳಿದ ಸಾವುಕಾರರ ಮನದಲ್ಲಿ ಶಂಕೆ ಮೂಡಿತು. ದಾತಾದೀನ ಹೋರಿಯ ಹಸುವನ್ನು ನೋಡಿ ಸಮಾಧಾನದ ಮಾತನ್ನು ಆಡಿದರೂ ಆತನ ಮನಸ್ಸಿನ ಆಳದಲ್ಲಿ ಅಸೂಯೆಯ ಛಾಯೆ ಮೂಡಿತ್ತು.

ಹೋರಿಯ ಮನೆಯಲ್ಲಿ ಒಂದು ದುರಂತವೇ ನಡೆಯುತ್ತದೆ. ಹೋರಿಯ ಹಸುವನ್ನು ನೋಡಿ ಹೀರಾ ಸಹಿಸಲಾರದೇ ಹಸುವಿಗೆ ವಿಷ ಪ್ರಹಸನ ಮಾಡಿ ಓಡಿ ಹೋಗುವವನು. ಅದನ್ನು ಹೋರಿ ಗಮನಿಸಿದರೂ ಹಸುವನ್ನು ಉಳಿಸಿಕೊಳ್ಳಲಾಗದೇ ತನ್ನ ಕಣ್ಣ ಮುಂದೆಯೇ ತನ್ನ ದೇವತೆ ಮನೆಯ ಸೌಭಾಗ್ಯ ಮಾಯವಾದರೂ ಹೋರಿ ಏನೂ ಮಾಡಲಾಗದ ಪರಿಸ್ಥಿತಿಯಲ್ಲಿ ಇರುತ್ತಾನೆ.

ತನ್ನ ಸಂಕಟವನ್ನು ಹೋರಿ ತನ್ನ ಹೆಂಡತಿಯ ಹತ್ತಿರ ತೋಡಿಕೊಂಡಾಗ ಅದರಿಂದ ಕಣ್ಣೀರಿಡುವನು. ಧನಿಯಾಳು ಕುಪಿತಗೊಂಡು ಹೀರಾನ ಮೇಲೆ ಹರಿದಾಳುವಳು. ಇದು ಹಳ್ಳಿಯ ಪಂಚರ ಹತ್ತಿರ ದೂರು ಹೋದಾಗ ಅಲ್ಲಿ ದಾತಾದೀನ, ಪಟೇಶ್ವರಿ, ದರೋಗ ಹಾಗೂ ಝಿಂಗಾರಿ ಸಿಂಹ ಎಲ್ಲರೂ ಸೇರಿ ವಿಚಾರಣೆ ನಡೆಸುವರು. ಆಗ ಅಲ್ಲಿ ಧನಿಯಾ ಮಾತ್ರ ಗಂಡನ ವಿರುದ್ಧ ಮತ್ತು ಹೀರಾನ ವಿರುದ್ದ ವಾದಕ್ಕಿಳಿದಳು. ಆದರೆ ಹೋರಿ ಮಾತ್ರ ಸತ್ಯ ತಿಳಿದಿದ್ದರೂ ತಮ್ಮನ ಮಾನವನ್ನು ಅವನ ಸಂಬಂಧವನ್ನು ತೊರೆದುಕೊಳ್ಳಲು ಮಾತ್ರ ಸಿದ್ಧನಿರಲಿಲ್ಲ. ತಮ್ಮನನ್ನು ರಕ್ಷಿಸುವ ಸಲುವಾಗಿ ಧನಿಯಾಳಿಗೆ ಚೆನ್ನಾಗಿ ತಿಳಿ ಹೇಳುವನು. ಆದರೂ ಧನಿಯಾ ಪಂಚರ ಮುಂದೆ ಹೀರಾನೇ ಕಾರಣ ಎಂದು ಹೇಳಿದರೂ ಅಲ್ಲಿ ಹೋರಿ ಅವಳ ಈ ವಿರೋಧವನ್ನು ಖಂಡಿಸುತ್ತಾನೆ.

ಪಂಚರು ಸೇರಿ ಹೀರಾನ ಮನೆಯ ಜಪ್ತಿ ಮಾಡುವ ಹಾಗೂ ಅವನಿಗೆ ದಂಡ ಹಾಕುವ ಹುನ್ನಾರ ನಡೆಸುವರು. ಮತ್ತೆ ಅವರಲ್ಲಿ ಚರ್ಚೆ ನಡೆಯುವುದು. ಇಲ್ಲದ ಹೀರಾನ ಮೇಲೆ ದಂಡ ಹಾಕಿದರೆ ಯಾವ ಫಲ? ಅವನ ಮನೆಯೂ ಖಾಲಿ ಇದೆ ಎಂದು ಯೋಚಿಸಿ, ಅಲ್ಲದೆ ಹೋರಿ ತಮ್ಮನನ್ನು ರಕ್ಷಿಸಲು ಹವಣಿಸುತ್ತಿರುವುದನ್ನು ಕಂಡು ಅವನ ಆತ್ಮೀಯ ಸಂಬಂಧವನ್ನು ಅಸ್ತ್ರವಾಗಿರಿಸಿಕೊಂಡು ಹೋರಿಗೆ ಲಂಚ ಕೊಡು ಇಲ್ಲವಾದರೆ ದಂಡ ಕೊಡುವಂತೆ ಹಿಂಸಿಸುವರು.

ಧನಿಯಾ ಮಾತ್ರ ಇದನ್ನು ವಿರೋಧಿಸುವಳು. ಆದರೆ ಹೋರಿ ಅವಳನ್ನು ದಂಡಿಸುವವನು. ಧನಿಯಾಳು ತಾನು ಮಾಡದ ತಪ್ಪಿಗೆ ದಂಡ ಏಕೆ ಕಟ್ಟಬೇಕು. ನಮ್ಮ ಹಸು ಸತ್ತು ಹೋಗಿ ನಮಗೆ ನಷ್ಟವಾಗಿದೆ. ಆದರೂ ಹಣ ಇಲ್ಲದ ಸಂದರ್ಭದಲ್ಲಿ ಸಾಲ ಮಾಡಿ, ದಂಡ ಏಕೆ ಕಟ್ಟಬೇಕು ಎಂದು ಗಂಡನೊಂದಿಗೆ ಜಗಳ ಪ್ರಾರಂಭ ಮಾಡುವಳು. ಧನಿಯಾಳಿಂದ ಪಂಚರಿಗೆ ಅವಮಾನವಾಗುತ್ತದೆ. ಅವರಿಗೆ ಯಾವತ್ತು ಈ ರೀತಿಯ ಅವಮಾನ ಆಗಿರಲಿಲ್ಲ. ಆದ್ದರಿಂದ ತುಂಬ ಕುಪಿತಗೊಂಡು ಧನಿಯಾಳನ್ನೆ ಕೊಲೆಗಡಿಕೆ ಎಂದು ಸಂಭೋದಿಸಿ ತಮ್ಮ ಕೋಪವನ್ನು ಶಮನಗೊಳಿಸುವರು. ಇಲ್ಲಿ ಹೋರಿ ಮತ್ತು ಧನಿಯಾಳ ಸಂಬಂಧ ಮಾತ್ರ ತುಂಬ ಹದಗೆಟ್ಟು ಹೋಗಿತ್ತು. ಹೋರಿಯ ಈ ಮುಗ್ಧತೆ, ಶ್ರಮದ ಬದುಕಿನಲ್ಲೂ ತಮ್ಮಂದಿರು ಇವನಿಗೆ ಅನ್ಯಾಯ ಮಾಡಿದರೂ ಅವನ್ನುನ್ನು ಕ್ಷಮಿಸಿ ನಂತರ ಅವರನ್ನು ರಕ್ಷಣೆ

ಮಾಡಿಕೊಳ್ಳುವ ತವಕ ಬಡವರಿಗೆ ಇದ್ದ ಮನಸ್ಸು, ಮಾನವೀಯತೆ ಹೋರಿಗಲ್ಲದೆ ಶ್ರೀಮಂತರಿಗೆಲ್ಲಿ ಬರಬೇಕು.

ಹೋರಿ ತನ್ನ ಬದುಕಿನ ಉದ್ದಕ್ಕೂ ಸೋಲನ್ನು ಅನುಭವಿಸುತ್ತಾನೆ. ತನ್ನ ನೈತಿಕತೆಯನ್ನು ಬಿಡದೇ ಬಾಂಧವ್ಯದ ನಿಟ್ಟಿನಲ್ಲಿ ಏನೆ ಆಗಲಿ ಸಹನೆ ತಾಳ್ಮೆಯಿಂದ ಎಲ್ಲೂ ತನ್ನ ಹತಾಶೆಯನ್ನು ತೋರದೆ ಮುಗ್ಧವಾದ ಭಾವನೆಗಳಿಂದ ತೋರುತ್ತಾ, ಗೌರವಿಸುತ್ತಾ ಕಾದಂಬರಿಯ ಉದ್ದಕ್ಕೂ ಸಾಗುವನು. ತಾನು ಪ್ರೀತಿಯಿಂದ ತಂದ ಹಸು ಮರಣ ಹೊಂದಿದ ಮೇಲೆ ತನ್ನ ಮನೆಯೂ ಬರಿದಾಗಿ, ಹೀರಾ ಓಡಿ ಹೋದ ಮೇಲೆ ಮತ್ತೆ ಹೀರಾನ ಸಂಸಾರದ ವ್ಯವಸಾಯದ ಸಂಪೂರ್ಣ ಜವಾಬ್ದಾರಿಯನ್ನು ಹೆಗಲಿಗೆ ಹಾಕಿಕೊಳ್ಳುವಂತಹ ಒಬ್ಬ ಅಂತಃಕರಣವುಳ್ಳ ವ್ಯಕ್ತಿಯಾಗಿ ನಿಲ್ಲುತ್ತಾನೆ.

ಹೋರಿಯ ತಮ್ಮನ ಮನೆ ಜಪ್ತಿಯಾಗುವುದನ್ನು ಉಳಿಸಿಕೊಳ್ಳಲು ಪಂಚರಿಗೆ ದರೋಗದವರಿಗೆ ೫೦ ರೂಪಾಯಿ ನೀಡಬೇಕಾಗಿ ಬರುತ್ತದೆ. ಆದರೆ ಹೋರಿಯ ಹತ್ತಿರ ಒಂದು ರೂಪಾಯಿ ಇಲ್ಲ. ಆದರೆ ಎಲ್ಲ ಸಾಲವನ್ನು ತೀರಿಸುವ ಧೈರ್ಯ ಮಾತ್ರ ಹೋರಿಯಲ್ಲಿದೆ. ಹೋರಿರಾಮ ಎಲ್ಲ ಶ್ರೀಮಂತರ ಕಾಲುಗಳಿಗೆ ಎರಗಿ ತನ್ನ ಈ ಸಂಕಟದಿಂದ ಪಾರು ಮಾಡುವಂತೆ ಬೇಡಿಕೊಳ್ಳುವನು. ಐವತ್ತು ರೂಪಾಯಿ ಎಂಬುದು ಹೋರಿಯ ಪಾಲಿಗೆ ಐವತ್ತು ಜನ್ಮ ಹುಟ್ಟಿ ಬಂದರೂ ಕೊಡಲು ಸಾಧ್ಯವಿಲ್ಲ. ಒಂದು ಹತ್ತು ರೂಪಾಯಿ ಸಿಕ್ಕಿದರೆ ಅದೇ ಸಾವಿರ ರೂಪಾಯಿ ಸಿಕ್ಕಂತೆ. ಈ ಪರಿಸ್ಥಿತಿಯಲ್ಲಿ ಹೋರಿ ಹಣ ಹೊಂದಿಸುವುದು ಕಷ್ಟವಾದಾಗ ಪಟೇಶ್ವರಿ, ಝಿಂಗರಿಗೆ ಹೇಳಿ ಕಳುಹಿಸುವನು. ಹೋರಿಗೆ ೩೦ ರೂಪಾಯಿ ಸಾಲ ಕೊಡುವಂತೆ. ಝಿಂಗರಿ ಸಿಂಹ ಹೋರಿಗೆ ೩೦ ರೂಪಾಯಿ ಕೈಗಿಟ್ಟು ಉಪಕಾರದ ಹೊರೆಯನ್ನು ಹೊರೆಸುತ್ತಾ ಹೇಳಿದ. ಇಂದೆ ಕಾಗದ ಪತ್ರ ಬರೆಸಿಕೊಡಬೇಕೆಂದು ಹೇಳಿದನು. ಆದರೆ ಧನಿಯಾ ಹಣವನ್ನು ಕೊಡಲು ಬಿಡದೇ ರಂಪಾಟ ಮಾಡಿ ದರೋಗದವರನ್ನು ಬೈದು ತಾನು ಕೋರ್ಟಿನ ಬಾಗಿಲು ಹತ್ತಲು ಸಿದ್ಧ ಎಂದು ಹೇಳಿದಳು.

ಹೋರಿಯ ಹಣದಿಂದ ಪಂಚರು ಸೇರಿ ಮೋಸಮಾಡಿ ವಸೂಲಿ ಮಾಡುವ ಕಾರ್ಯಕ್ಕೆ ಧನಿಯಾಳು ತಣ್ಣೀರಿನ ಎರಕ ಹೊಯ್ದು ಬಿಟ್ಟಳು. ಮಾಡದ ತಪ್ಪಿಗೆ ದಂಡ ವಸೂಲಿ ಮಾಡಿ ತಮ್ಮ ಲಾಭವನ್ನು ನೋಡುವ ಈ ಶ್ರೀಮಂತರು ಬಡವರ ಪಾಲಿಗೆ ರಾಕ್ಷಸರರಂತೆ, ಮಾನವನ ಬೆನ್ನಿಗೆ ಹತ್ತಿದ ಬೇತಾಳದಂತೆ ತಮ್ಮ ಅಧಿಕಾರ ದರ್ಪಗಳಿಂದ ಹೋರಿಯನ್ನು ಈ ರೀತಿಯ ಸುಲಿಗೆ ಮಾಡುವರು.

ಇದು ಹೋರಿಯ ಮುಗ್ಧ ಹಾಗೂ ಶಾಂತ ಸ್ವಭಾವ ಹಾಗೂ ವಿರೋಧ ತೋರದ ಮನೋಭಾವವನ್ನು ತೋರಿಸುತ್ತದೆ. ಅವನು ಗೌರವದಿಂದ ಶ್ರೀಮಂತರನ್ನು ನೋಡುವುದರಿಂದ ಅವರ ಎಲ್ಲ ಶೋಷಣೆಯಲ್ಲಿ ಮೂಕನಂತೆ ವರ್ತಿಸುವುದು ನಮಗೆ ತಿಳಿಯುತ್ತದೆ"[.]

ಹೋರಿರಾಮನಿಗೆ ಇನ್ನೊಂದು ದುರಂತ ಕಾದಿತ್ತು. ಹಸುವಿನ ಸಾವಿನಿಂದ ವಾದ ವಿವಾದಗಳಿಂದ ಧನಿಯಾ ಹಾಗೂ ಹೋರಿಯ ನಡುವೆ ಕೆಲವು ದಿನಗಳವರಗೆ ಅಸಮಾಧಾನ ಹೊಗೆಯಾಡತೊಡಗಿತು. ಅಲ್ಲದೆ ಅವರಿಬ್ಬರ ನಡುವೆ ವಿರಸದ ಛಾಯೆಯೂ ಮೂಡಿತು. ಅಷ್ಟರಲ್ಲಿ ಈ ತರದ ಸಮಸ್ಯೆ ಹೋರಿಗೆ ಆಘಾತವನ್ನು ತಂದಿತ್ತು.

ಹೋರಿರಾಮನ ಮಗ ಗೋಬರ ಹೋರಿ ಹಸು ತೆಗೆದುಕೊಂಡಿದ್ದ. ತನ್ನ ಸ್ನೇಹಿತನಾದ ಭೋಲಾನ ಮನೆಗೆ ಗೋಬರ ಹೋಗಿ ಬರುವುದು ನಡೆಯುತ್ತಿತ್ತು. ಭೋಲಾನ ಮಗಳು ಜುನಿಯಾ ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡು ತಂದೆಯ ಮನೆಯಲ್ಲೆ ಇದ್ದಳು. ಗೋಬರ ಹಾಗೂ ಜುನಿಯಾ ಇಬ್ಬರಿಗೂ ಪರಸ್ಪರ ಪರಿಚಯವಾಯಿತು. ಮೊದಲ ಹಂತದ ಈ ಪರಿಚಯವು ನಂತರ ಪ್ರೇಮಕ್ಕೆ ತಿರುಗಿ ಜುನಿಯಾ ಐದು ತಿಂಗಳು ಬಸಿರಿ ಕೂಡ ಆಗುವಳು. ಈ ಸಂದರ್ಭದಲ್ಲಿ ಗೋಬರ ಆಕೆಯನ್ನು ತನ್ನ ಮನೆಗೆ ಕರೆದುಕೊಂಡು ಬಂದು ಅವಳನ್ನು ಬಿಟ್ಟು ಓಡಿ ಹೋಗುವನು. ಆದರೆ ಅವಳಿಗೆ ಬೇರೆ ದಾರಿ ಇಲ್ಲದೆ ಹೋರಿಯ ಮನೆಯೊಂದೇ ಆಶ್ರಯವಾಗಿತ್ತು.

ಈ ರೀತಿಯ ಸಂದರ್ಭದಲ್ಲಿ ಹೋರಿ ಮತ್ತು ಧನಿಯಾಳು ಮೊದಲಿಗೆ ಜುನಿಯಾಳನ್ನು ನಿಂದಿಸಿದರೂ ಅವಳ ಪರಿಸ್ಥಿತಿಯನ್ನು ನೋಡಿ ಮರುಗಿ ಅವಳನ್ನು ತಮ್ಮ ಸೊಸೆಯೆಂದು ಮನೆಯಲ್ಲಿ ಆಶ್ರಯ ನೀಡಿದರು. ಇದರಿಂದ ಹಳ್ಳಿಯಲ್ಲೇ ಒಂದು ದೊಡ್ಡ ಅಪರಾಧವಾಗುತ್ತದೆ. ಇಡೀ ಹಳ್ಳಿಯೇ ಈ ವಿಚಾರವಾಗಿ ಚರ್ಚೆ ಮಾಡುತ್ತಿತ್ತು. ಹಳ್ಳಿಯವರು ಹೋರಿಯನ್ನು ಜಾತಿಯಿಂದ ಹೊರಹಾಕಿದರು. ಯಾರೂ ಕೂಡ ಅವನ ಹುಕ್ಕಾ ಸೇದುತ್ತಿರಲಿಲ್ಲ. ಅಷ್ಟಲ್ಲದೆ ಯಾರೂ ಕೂಡ ಹೋರಿಯ ಮನೆಯ ನೀರನ್ನೂ ಕುಡಿಯುತ್ತಿರಲಿಲ್ಲ. ಹೋರಿರಾಮನಿಗೆ ಊರ ಬಾವಿಯಿಂದ ನೀರನ್ನು ತರಬಾರದು ಎಂದು ಹೇಳಲಾಗುತ್ತಿತ್ತು. ಇದಕ್ಕೆ ಧನಿಯಾಳದ್ದು ಮಾತ್ರ ವಿರೋಧ ಇದ್ದೆ ಇರುತ್ತಿತ್ತು. ಆಕೆ ಎಲ್ಲರನ್ನು ದೂಷಿಸುವ ಕಾರ್ಯದಲ್ಲಿ ನಿರತಳಾಗಿದ್ದಳು. ಅಲ್ಲದೆ ಅವರು ಹಾಕಿದ ಈ ರೀತಿಯ ನೀತಿಯನ್ನು ಅವಳು ಉಲ್ಲಂಘಿಸಲು ಮುಂದಾಗುತ್ತಿದ್ದಳು.

ಜುನಿಯಾಳ ಪರಿಸ್ಥಿತಿಯೂ ಸಹ ತುಂಬ ಕಷ್ಟಕರವಾಗಿತ್ತು. ಇವಳು ಮನೆಯಿಂದ ಹೊರಗೆ ಬಂದರೆ ಸಾಕು ವಾಗ್ವಾದಗಳ ಸುರಿಮಳೆಯೆ ಅವಳ ಮೇಲೆ ಸುರಿಯುತ್ತಿತ್ತು. ದಾತಾದೀನನು ಮಾತ್ರ ಈ ವಿಷಯವಾಗಿ ಗೇಲಿಮಾಡುವ ಇಂತಹ ಸುವರ್ಣಾವಕಾಶವನ್ನು ಬಿಡದೇ ಧನೆಯಾಳ ಹತ್ತಿರ ಮಾತನಾಡಿದನು. ಜುನಿಯಾಳನ್ನು ಮನೆಗೆ ಸೇರಿಸಬಾರದಿತ್ತು. 'ಹಾಲಿಗೆ ನೊಣ ಬಿದ್ದರೆ ಮನುಷ್ಯ ಅದನ್ನು ತೆಗೆದುಹಾಕಿ ಬಿಡುತ್ತಾನೆ. ಹಾಗೂ ಹಾಲನ್ನು ಕುಡಿದು ಬಿಡುತ್ತಾನೆ' ಎಂದು ಉದಾಹರಣೆ ನೀಡಿ ಅವಳನ್ನು ಮನೆಯಿಂದ ಹೊರಗೆ ಹಾಕಿ ಮಾನ ಕಳೆದುಕೊಳ್ಳಬೇಡಿ. 'ಗಂಡು ಮಕ್ಕಳು

ಇಂತಹ ತಪ್ಪನ್ನು ಮಾಡುವುದು ಸಹಜ'. ನೀವು ಇದನ್ನು ಶುದ್ಧಿ ಮಾಡಿಕೊಳ್ಳುವ ಪರಿಹಾರ ಮಾಡಿಕೊಳ್ಳಿ ಎಂದು ಉಪದೇಶದ ಜೊತೆಗೆ ಸಲಹೆಯನ್ನು ನೀಡುವನು.

ಇಷ್ಟೊಂದು ಮಾತನಾಡಿದ ದಾತಾದೀನನ ಮಗ ಮತಾದೀನ ಒಬ್ಬ ಚಮ್ಮಾರ ಸ್ತ್ರೀಯಾದ ಸಿಲಿಯಾಳೊಂದಿಗೆ ಸಂಬಂಧವನ್ನಿಟ್ಟುಕೊಂಡು ತನ್ನ ಮನೆಯಲ್ಲಿಯೇ ಕೂಲಿ ಮಾಡುವುದು ಈ ಹಳ್ಳಿಯವರಿಗೆ ಗೊತ್ತಿತ್ತು. ಆದರೆ ಅದರ ಬಗ್ಗೆ ಯಾವ ವಿರೋಧವೂ ವ್ಯಕ್ತವಾಗುತ್ತಿರಲಿಲ್ಲ; ಮಾತ್ರವಲ್ಲ ಅದಕ್ಕೆ ದಂಡವನ್ನೂ ಹಾಕುತ್ತಿರಲಿಲ್ಲ. ಕಾರಣ ಅವರು ಶ್ರೀಮಂತರು ಎನ್ನುವುದರಿಂದ. ಬ್ರಾಹ್ಮಣ ಮುದುಕ ಹಾಗೂ ಮಗನು ತಿಲಕ ಹಚ್ಚಿ ಪಂಚಾಂಗ ನೋಡುತ್ತಿದ್ದ, ಭಾಗವತ ಪುರಾಣ ಹೇಳುತ್ತಿದ್ದ, ಧರ್ಮ ಸಂಸ್ಕಾರ ಮಾಡುತ್ತಿದ್ದ. ಆದರೆ ಅವನ ಪ್ರತಿಷ್ಠೆಗೆ ಮಾತ್ರ ಸ್ವಲ್ಪವೂ ಕುಂದು ಬರುತ್ತಿರಲಿಲ್ಲ. ಇವನು ಪ್ರತಿದಿನ ಸ್ನಾನ, ಪೂಜೆ ಮಾಡಿಕೊಂಡು ತನ್ನ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಂಡು ಬಿಡುತ್ತಿದ್ದ.

ಶ್ರೀಮಂತರ ದೃಷ್ಟಿಕೋನದಲ್ಲಿ ಅವರು ಮಾಡುವುದೆಲ್ಲ ಸರಿ ಹಾಗೂ ಅದನ್ನು ಯಾರೂ ಹೇಳುವಂತಿಲ್ಲ. ಆದರೆ ಹೋರಿ ಧನಿಯಾ ಇಬ್ಬರೂ ಒಂದು ಹೆಣ್ಣಿನ ಮಾನ, ಪ್ರಾಣಗಳ ರಕ್ಷಣೆ ಮಾಡಿದ್ದು ಶ್ರೀಮಂತರ ದೃಷ್ಟಿಯಲ್ಲಿ ಅಪರಾಧವಾಗುತ್ತದೆ.

ಧನಿಯಾ ಮತಾದೀನನ ಮಾತಿಗೆ ಉತ್ತರವನ್ನು ಕೊಡದೆ ಇರಲಿಲ್ಲ. ಆಕೆ ಮಾತುಗಳನ್ನು ಗಟ್ಟಿಯಾಗಿ ನುಡಿದಳು. 'ನಮಗೆ ಕುಲ ಪ್ರತಿಷ್ಠೆಯ ಮೇಲೆ ಅಂತಹ ಪ್ರೀತಿ ಇಲ್ಲ ಸೋಮಿ, ಅದಕ್ಕಾಗಿ ಒಂದು ಜೀವನವನ್ನು ಬಲಿ ಕೊಡಲು ನಾವು ತಯಾರಿಲ್ಲ. ಮದುವೆ ಆಗಿಲ್ಲದಿರಬಹುದು. ಆದರೆ ನನ್ನ ಮಗ ಅವಳ ಕೈಹಿಡಿದಿದ್ದಾನಲ್ಲ, ಯಾವ ಮುಖ ಇಟ್ಟುಕೊಂಡು ಅವಳನ್ನು ಹೊರ ಹಾಕಬೇಕು' ಎಂದು ಹೇಳಿ ಶ್ರೀಮಂತರು ಮಾಡಿದ ಈ ರೀತಿಯ ಅನಾಚಾರ ಹಾಗೂ ಶ್ರೀಮಂತರು ಮಾನವೀಯತೆ ಇಲ್ಲದ ಈ ರೀತಿ ಕೃತ್ಯಗಳನ್ನು ಮಾಡುತ್ತಾರೆ. ಧರ್ಮದ ಹೆಸರಿನಲ್ಲಿ, ಜಾತಿಯ ವಿಷಯದಲ್ಲಿ, ವರ್ಗದ ವಿಷಯದಲ್ಲಿ ಬಡವರಿಗೆ ಮೋಸ ಮಾಡುವರು. ಆದರೆ ನಮಗೆ ಮರ್ಯಾದೆಯ ಮೇಲೆ ಅಷ್ಟೊಂದು ಪ್ರೀತಿ ಇಲ್ಲ ಎಂದು ಹೇಳುವಳು'[2].

ಜುನಿಯಾಳಿಗೆ ಮನೆಯಲ್ಲಿ ಆಶ್ರಯ ನೀಡಿದ್ದಕ್ಕೆ ಹೋರಿರಾಮನಿಗೆ ಹಳ್ಳಿಯ ಪಂಚರೂ ಸೇರಿ ನೂರು ರೂಪಾಯ ಜುಲ್ಮಾನೆ ವಿಧಿಸಿದರು. ಇಲ್ಲಿ ರೈತನನ್ನು ಅವಮಾನಗೊಳಿಸುವ ಒಂದು ದೊಡ್ಡ ಸಂಚು ನಡೆಸಿಕೊಂಡು ಸಭೆ ಸೇರಲಾಗಿತ್ತು. ಹೋರಿರಾಮನು ಮಾಡಿದ ಮಾನವೀಯತೆಯ ಕಾರ್ಯಕ್ಕೆ ಜುಲ್ಮಾನೆ ನೀಡುವಂತಾಗುವುದು. ಆದರೆ ಹಳ್ಳಿಯ ಹಿರಿಯರೆಲ್ಲರೂ ತಮ್ಮದೇ ಆದ ತಪ್ಪುಗಳನ್ನು ಮಾಡುತ್ತಿದ್ದರು. ಝಿಂಗಾರಿ ಸಿಂಹನಿಗೆ ಇಬ್ಬರು ಹೆಂಡತಿಯರಿದ್ದರು. ಅವರು ತೀರಿಹೋದ ಮೇಲೆ ಮೂರನೆಯ ಮದುವೆಯನ್ನು ಮಾಡಿಕೊಂಡಿದ್ದ. ಇವನ ಅನಾಚಾರಗಳು ಭಯದಿಂದ ಮುಚ್ಚಿಕೊಂಡು ಹೋಗುತ್ತಿದ್ದವು. ಅದೇ ರೀತಿ

ನೋಖೇರಾಮನೂ ಸಹ ಒಬ್ಬ ಲೇವಾದೇವಿಯವನಾಗಿದ್ದು ಇವನು ರೈತರ ರಕ್ತ ಹೀರುವವನಾಗಿದ್ದನ್ನು. ರಾಯಸಾಹೇಬರ ಬದಲಾಗಿ ಹೋರಿಗೆ ೧೦೦ ರೂಪಾಯಿ ದಂಡಹಾಕಿ ಮತ್ತು ಹಳ್ಳಿಯಿಂದ ಹೋರಿರಾಮನನ್ನು ಓಡಿಸಿ ನಂತರ ಅವನ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ವ್ಯಾಜ್ಯ ಹೂಡುವ ಸಂಚು ಇವನದು. ಇವನು ಬೇರೆ ಹೆಣ್ಣು ಮಕ್ಕಳೊಂದಿಗೆ ಸಂಬಂಧ ಹೊಂದಿದ್ದರೂ ಈ ರೀತಿ ಉತ್ತಮವೆಂಬಂತೆ ಮಾತನಾಡುತ್ತಿದ್ದನು. ಹೋರಿರಾಮನು ತೆರಿಗೆಯನ್ನು ಪೂರ್ತಿಯಾಗಿ ಪಾವತಿಸಿದರೂ ಪಟೇಶ್ವರಿ ಹಾಗೂ ನೋಖೇರಾಮ ಗರ್ವದಿಂದ ಹೋರಿಗೆ ಯಾವ ರಸೀದಿ ಕೊಟ್ಟಿಲ್ಲ. ಆದ್ದರಿಂದ ಅವನು ತೆರಿಗೆಯನ್ನು ಕಟ್ಟಿಲ್ಲ ಅಂತ ವಾದಿಸಿ ಅವನ ಮೇಲೆ (ಅಪರಾಧದ) ದಂಡ ವಿಧಿಸುವುದರ ಜೊತೆಗೆ ಅವನ ಆಸ್ತಿ-ಪಾಸ್ತಿ ವಶಪಡಿಸಿಕೊಳ್ಳಬಹುದು ಎಂದು ಯೋಚಿಸುವರು.

ದಾತಾದೀನನ ಪ್ರಶ್ನೆಗೆ ಧನಿಯಾಳ ಈ ಉತ್ತರ ಬಡವರು ನೀತಿಯನ್ನು ಬಿಟ್ಟು ಬದುಕುವುದಿಲ್ಲ. ಶ್ರೀಮಂತರ ಬದುಕು ನೀತಿ ರಹಿತವಾಗಿದ್ದು ಶ್ರೀಮಂತರು ವಿಲಾಸಿ ಜೀವನದಲ್ಲಿ ಯಾವುದೇ ನೈತಿಕತೆಯನ್ನು ಅಳವಡಿಸಿಕೊಳ್ಳದೆ ಕೇವಲ ತಮ್ಮ ಸುಖವನ್ನು ಮಾತ್ರ ನಿರೀಕ್ಷಿಸುವ ನಿಟ್ಟಿನಲ್ಲಿ ಸಾಗುತ್ತಾರೆ. ಬಡವರು ಮಾನಕ್ಕೆ ಅಂಜಿ ಸಮಾಜಕ್ಕೆ ತಗ್ಗಿ ಬಗ್ಗಿ ನಡೆಯುವ ಅವರ ಬದುಕಿನ ನೈತಿಕ ನೆಲೆಯ ವಿವಿಧ ಆಯಾಮಗಳನ್ನು ಕಾದಂಬರಿ ನಿರೂಪಿಸಿದೆ.

ಇತ್ತ ಕಡೆ ಹೋರಿರಾಮನಿಗೆ ದಂಡ ಹಾಕಿದ್ದನ್ನು ಧನಿಯಾ ವಿರೋಧಿಸುವಳು. ತುಂಬಿದ ಸಭೆಯಲ್ಲಿ ಬಿಕ್ಕುತ್ತಾ ಆಕೆ ಹೀಗೆ ಹೇಳಿಕೊಳ್ಳುವಳು. ನಾವು ಬಡವರು ನಮ್ಮನ್ನು ಇಷ್ಟೊಂದು ಗೋಳು ಹಾಕಿಕೊಂಡರೆ ನಿಮಗೆ ಸುಖ ಸಿಗುವುದಿಲ್ಲ. ೧೦೦ ರೂಪಾಯಿ ದಂಡ ಎಲ್ಲಿಂದ ತರಬೇಕು. ನಮ್ಮ ಸರ್ವನಾಶಕ್ಕೆ ನೀವು ಈ ರೀತಿ ಮಾಡಿದರೆ ನಾವು ಹಳ್ಳಿಬಿಟ್ಟು ಹೋಗುವುದಿಲ್ಲ ಎಂದು ಶಾಪ ಹಾಕುವಳು. 'ನಾನು ನನ್ನ ಸೊಸೆಯನ್ನು ನನ್ನ ಮನೆಯಲ್ಲಿ ಇಟ್ಟುಕೊಂಡಿದ್ದಕ್ಕಾಗಿ ನನಗೆ ಇಷ್ಟು ಕಠಿಣವಾದ ಜುಲ್ಮಾನೆ ವಿಧಿಸಿದ್ದೀರಿ. ನಾನೇಕೆ ಅವಳನ್ನು ಮನೆಯಿಂದ ಹೊರಗೆ ಹಾಕಬೇಕು' ಎಂದು ಪಂಚರ ವಿರುದ್ಧ ಕಿಡಿಕಾರಿದಳು.

ಹೋರಿರಾಮ ಮಾತ್ರ ಪಂಚರನ್ನು ಗೌರವಿಸಿ ಅವರು ಹೇಳಿದ ಜುಲ್ಮಾನೆ ಕಟ್ಟಲು ಮುಂದಾಗುವನು. ಇದನ್ನು ಧನಿಯಾಳು ವಿರೋಧಿಸಿದಾಗ ಹೋರಿಯು ಧನಿಯಾಳಿಗೆ 'ನೀನೇಕೆ ಮಾತನಾಡುತ್ತೀಯಾ, ಪಂಚರಲ್ಲಿ ಪರಮೇಶ್ವರ ವಾಸಿಸುತ್ತಾನೆ. ಅವರು ನೀಡಿದ ನ್ಯಾಯವನ್ನು ತಲೆಬಾಗಿ ಒಪ್ಪಬೇಕು' ಎಂದು ಹೇಳುವನು. ಹೋರಿರಾಮನ ಈ ಮಾತಿನಲ್ಲಿ ಒಂದು ಕಡೆ ಅವನ ಮುಗ್ಧತೆ ಇದೆ. ಮತ್ತೊಂದು ಕಡೆ ಊಳಿಗಮಾನ್ಯಶಾಹಿಯ ಸಾಮಾಜಿಕ ಮೌಲ್ಯಗಳನ್ನು ಹಾಗೂ ನಂಬಿಕೆಗಳನ್ನು ವಿರೋಧಿಸದೆ ಅವನ್ನು ಶಿರಸಾವಹಿಸಿ ಪಾಲಿಸಬೇಕು ಎಂಬ ಪ್ರಜ್ಞೆ ಇದೆ. ಪಂಚರ ಒಳಸಂಚು ತಿಳಿಯದೆ ತನಗೆ ಪಂಚರು ಹೇಳಿದ್ದನ್ನು ಮಾಡುವ ಕೆಲಸ

ಹೋರಿಯದಾಗಿದೆ. ಹೋರಿಯು ಯಾವುದೇ ವಿಷಯವನ್ನು ವಿರೋಧಿಸುವ, ಆಕ್ರೋಶಗೊಳ್ಳುವ ಹಾಗೂ ನಿರಾಶೆಗೊಳ್ಳುವ ಹಾಗೂ ಆತ್ಮವಿಮರ್ಶೆಮಾಡಿಕೊಳ್ಳುವ ಯಾವುದೇ ರೀತಿಯ ಅಂಶಗಳು ಕಂಡುಬರುವುದಿಲ್ಲ. ಬದುಕು ಒಂದು ವ್ರತದಂತೆ. ಬಂದಿದ್ದೆಲ್ಲ ಬರಲಿ, ಹೋಗಿದ್ದೆಲ್ಲಾ ಹೋಗಲಿ ಎಂಬ ನಿಯಮಕ್ಕೆ ಒಳಪಟ್ಟಿರುವುದನ್ನು ಹೋರಿರಾಮನ ಮನೋಭಾವದಲ್ಲಿ ಕಾಣುತ್ತೇವೆ.

ಹೋರಿರಾಮ ಪಂಚರ ದಂಡಕ್ಕೆ ಹಣ ಕಟ್ಟುವಷ್ಟು ಸ್ಥಿತಿವಂತನಲ್ಲ. ಆದರೆ ವರ್ಷವಿಡಿ ದುಡಿದು ಕಾಳು, ಧಾನ್ಯ ಒಕ್ಕಣೆಯ ಸ್ಥಳದಲ್ಲಿ ಇಟ್ಟಿದ್ದನು. ಹೋರಿ ಪಂಚರಿಗೆ ಹೇಳುವನು. ನಿಮಗೆ ಎಷ್ಟೂ ಬೇಕೋ ಅಷ್ಟು ತೆಗೆದುಕೊಂಡು ಹೋಗಿ, ಎಲ್ಲವನ್ನು ತೆಗೆದುಕೊಳ್ಳಿ, 'ನಮ್ಮ ಒಡೆಯ ಆ ದೇವರೆ. ಅದರಲ್ಲಿ ನಿಮಗೇನಾದರೂ ಕೊರತೆ ಕಂಡುಬಂದರೆ ನಮ್ಮ ಎರಡೂ ಎತ್ತುಗಳನ್ನು ತೆಗೆದುಕೊಳ್ಳಿ' ಎಂದು ತನ್ನ ಮನಸ್ಸಿನ ಅಂತರಂಗದಿಂದ ಇವರನ್ನು ಇವರ ಕಾರ್ಯಗಳ ಹಾಗೂ ಅವರು ಹೋರಿಯನ್ನು ಸುಲಿಗೆ ಮಾಡದೆ ಬಿಡುವುದಿಲ್ಲ ಎಂಬುದನ್ನು ಖಚಿತಪಡಿಸಿಕೊಂಡು ಹೇಳಿದನು.

ಧನಿಯಾ ಇದನ್ನು ವಿರೋಧಿಸಿದರೂ ಹೋರಿರಾಮ ಸಮಾಜ ಎಂಬುದು ಜೀವನದ ಅವಿಭಾಜ್ಯ ಅಂಗವಾಗಿದೆ. ಅಂದರೆ ಸಮಾಜವನ್ನು ಬಿಟ್ಟು ಬದುಕಲು ಆಗುವುದಿಲ್ಲ. ನಿಂದನೆ ಹೊತ್ತುಕೊಳ್ಳುವುದಕ್ಕಿಂತ ದಂಡ ಕಟ್ಟುವುದು ಒಳ್ಳೆಯದು. ಇಲ್ಲವಾದರೆ ನಾವು ಇದ್ದೂ ಸತ್ತಂತೆ ಎಂದು ದಂಡಕ್ಕೆ ತನ್ನ ಎಲ್ಲಾ ಫಸಲನ್ನು ರಾತ್ರಿ ಇಡೀ ಝಿಂಗುರಿಸಿಂಹ ಪಡಸಾಲೆಗೆ ಹಾಕಿದನು. ಇಪ್ಪತ್ತು ಮಣ ಜವೆ ಗೋಧಿ, ಐದು ಮಣ ಗೋಧಿ, ಬಟಾಣಿ ಸ್ವಲ್ಪ ಕಡಲೆ ಹಾಗೂ ಸ್ವಲ್ಪ ಎಣ್ಣೆಕಾಳು ಇತ್ತು. ಇವೆಲ್ಲ ದಂಡಕ್ಕೆ ಅರ್ಪಿತವಾಗಿತ್ತು. ಇದರಲ್ಲಿ ಧನಿಯಾಳ ಪರಿಶ್ರಮ ಹಾಗೂ ಜುನಿಯಾಳ ಕೆಲಸ ಹಾಗೂ ತಮ್ಮ ಹೆಣ್ಣು ಮಕ್ಕಳು ಹೊಟ್ಟೆಗಿಲ್ಲದೆ ರಾತ್ರಿ ಹಗಲು ಗದ್ದೆಯಲ್ಲಿ ಕೆಲಸ ಮಾಡಿದ ಫಲ ಎಲ್ಲವೂ ದಂಡದ ಹೆಸರಿನಲ್ಲಿ ಶ್ರೀಮಂತರ ಮನೆ ಸೇರಿತ್ತು.

ಹೋರಿ ಈ ವರ್ಷದ ಬೆಳೆಯಿಂದ ಒಂದು ಕಂತಿನ ಗೇಣಿ ಕಟ್ಟುವ ಹಾಗೂ ಸ್ವಲ್ಪ ಬಡ್ಡಿಯನ್ನು ತೀರಿಸಬೇಕೆಂದು ಅಂದುಕೊಂಡಿದ್ದ. ಊಟಕ್ಕೆ ಸರಿಯಾಗುತ್ತೆ ಎಂದುಕೊಂಡ. ಹೋರಿಯ ಆಸೆಯೂ ಈಗ ಹೇಳಹೆಸರಿಲ್ಲದೆ ಹೋಗಿತ್ತು. ಹೋರಿಯ ಎಲ್ಲಾ ಧಾನ್ಯ ಹೋಗಿ ನಂತರ ಇವನ ತಲೆಯ ಮೇಲೆ ನೂರು ರೂಪಾಯಿ ದಂಡದ ಸಾಲ ಸೇರಿತ್ತು.

ಹೋರಿಯ ಮನೆಯಲ್ಲಿ ಊಟಕ್ಕೆ ಏನೂ ಇರಲಿಲ್ಲ. ಇಲ್ಲಿ ಸಮಾಜದ ಬಗ್ಗೆ ಗೌರವ ಹಾಗೂ ಸಮಾಜದ ತೀರ್ಮಾನಕ್ಕೆ ಬದ್ಧನಾಗಿ ನಡೆಯುವನು. ಹೋರಿಯ ಮನೆಯಲ್ಲಿ ಊಟಕ್ಕೆ ಇಲ್ಲದೇ ಉಪವಾಸ ವ್ರತ ನಡೆಯುತ್ತದೆ. ಧರ್ಮಕ್ಕೆ, ನೈತಿಕತೆಗೆ ಬೆಲೆ ಕೊಡುವ ಹೋರಿರಾಮ ಅವರ ದೌರ್ಜನ್ಯದಲ್ಲಿ ಈತನ ಧರ್ಮ, ನ್ಯಾಯ ನೀತಿ ಮಾತ್ರ ಯಾವತ್ತೂ ಮುಳುಗಿ ಹೋಗಲಿಲ್ಲ.

ಇದೇ ಸಮಯದಲ್ಲಿ ಜುನಿಯಾಳು ಗಂಡು ಮಗುವಿಗೆ ಜನ್ಮ ನೀಡಿದ್ದಳು. ಮಗುವಿನ ಜನ್ಮದಿನ ಸಂಭ್ರಮದ ಸ್ಥಿತಿಯಲ್ಲಿ ನೋಡಲು ಸಾಧ್ಯವಾಗುತ್ತಿರಲಿಲ್ಲ. ಹೋರಿಯು ಅದೇ ಸಮಯಕ್ಕೆ ತನ್ನ ಮನೆಯನ್ನು ಝಿಂಗುರಿ ಸಿಂಹನ ಹತ್ತಿರ ಎಂಬತ್ತು ರೂಪಾಯಿಗೆ ಅಡವು ಇಡುವನು. ತನ್ನ ದಂಡದ ಹಣಕ್ಕೆ ಮನೆಬಿಟ್ಟು ಬೇರೆ ಯಾವ ಆಸ್ತಿಯು ಇವನ ಹತ್ತಿರ ಇರಲಿಲ್ಲ. ಬೀಜ, ಬಟಾಣಿ ಹಾಗೂ ಗೋಧಿಯಿಂದ ಇಪ್ಪತ್ತು ರೂಪಾಯಿ ಸಿಕ್ಕಿತು. ಉಳಿದ ಹಣಕ್ಕೆ ಹೋರಿಯು ತನ್ನ ಮನೆ ಬರೆದು ಕೊಡುವನು. ಇಷ್ಟಾದರೂ ನೋಖೇರಾಮ ಹೇಗಾದರೂ ಮಾಡಿ ಎತ್ತುಗಳನ್ನು ಮಾರಿಸಿ ಬಿಡಬೇಕೆಂದು ಸಂಚು ಹಾಕಿದನು. ಹೋರಿಯ ವ್ಯವಸಾಯ ನಿಲ್ಲುವುದು. ಇದರಿಂದ ಹೋರಿ ಸಾಲ ತೀರಿಸಲು ಕಷ್ಟವಾಗುತ್ತದೆ ಎಂದು ನೋಖೇರಾಮನು ಹೊಂಚು ಹಾಕುವನು.

ಪಂಚರ ದಂಡಕ್ಕೆ ಹೋರಿ ಎಲ್ಲವನ್ನು ಸಮರ್ಪಿಸಿ ಮನೆಯನ್ನು ನಡೆಸುವುದು ಕಷ್ಟವಾಗುವಂತಹ ಯೋಚನೆಯಲ್ಲಿ ಮುಳುಗುವನು. ಮನೆಯಲ್ಲಿ ಎಲ್ಲರೂ ಉಪವಾಸ ಹಾಗೂ ಆ ಚಿಕ್ಕ ಮಗು ಸಹ ಹಸಿವಿನಿಂದ ನರಳುವುದನ್ನು ಕಾಣುತ್ತೇವೆ. ಸಮಾಜದ ಹೆಸರಿನಲ್ಲಿ ಪಂಚರು ಇಷ್ಟೊಂದು ಶೋಷಣೆ ಮಾಡುವುದು ಸರಿಯಲ್ಲ. ಅವರವರ ಸ್ವಾರ್ಥ ಸೇಡಿನಲ್ಲಿ ಹೋರಿರಾಮನನ್ನು ಸಂಪೂರ್ಣವಾಗಿ ನಾಶ ಮಾಡಿದರು.

ಹೋರಿಯ ದುರ್ಗತಿ ಎಂಬುದು ಈ ರೀತಿಯ ಸಂಕಟ ಹೊಂದಿದೆ. ಆತನ ಎತ್ತುಗಳು ಪಂಚರು ಬಿಟ್ಟರೂ, ಬೋಲಾ ತನ್ನ ಹಸುವಿನ ಹಣಕ್ಕಾಗಿ ಹಾಗೂ ಆತನ ಮಗಳಾದ ಜುನಿಯಾಳಿಗೆ ಆಶ್ರಯ ನೀಡಿದ್ದಕ್ಕಾಗಿ ಹಾಗೂ ಅವನ ಮಗ ಮಾಡಿದ ತಪ್ಪಿಗಾಗಿ ಎತ್ತುಗಳನ್ನು ಹಿಡಿದುಕೊಂಡು ಹೋಗುವನು.

ಹೋರಿಗೆ ಎತ್ತಗಳಿಲ್ಲದೆ ಬೇಸಾಯವನ್ನು ಮಾಡಲಾಗಲಿಲ್ಲ. ಹಳ್ಳಿಗಳಲ್ಲಿ ಬಿತ್ತನೆ ಶುರುವಾಗಿ ಹೋಗಿತ್ತು. ಈಗ ಹೋರಿಗೆ ತನ್ನ ಎತ್ತುಗಳಿಲ್ಲದ ಕಾರಣದಿಂದ ಅವನ ಎರಡು ಕೈಗಳು ಮುರಿದಂತೆ ಆಗಿತ್ತು. ಉಳಿದ ರೈತರೂ ಬಿತ್ತನೆಯಲ್ಲಿ ಮುಳುಗಿದರು. ಆದರೆ ಹೋರಿ ಮಾತ್ರ ಅತ್ತ ಇತ್ತ ಅಲೆಯುತ್ತಲೇ ಇದ್ದ. ತನ್ನ ಗದ್ದೆಯ ಬಿತ್ತನೆಯಲ್ಲಿ ತನ್ನ ಕುಟುಂಬದವರು ನಿರತರಾಗಿದ್ದರು. ಇದರಿಂದ ಮಾತ್ರ ಅವರ ಹೊಟ್ಟೆಗೆ ಅಲ್ಪಸ್ವಲ್ಪ ದೊರೆಯುತ್ತಿತ್ತು. ಬೇರೆಯವರ ಕೆಲಸವನ್ನು ಮಾಡುತ್ತಿದ್ದರು. ಆಗ ಅವರಿಗೆ ಬಿತ್ತನೆ ನಡೆಯುವವರೆಗೆ ಮಾತ್ರ ಊಟಕ್ಕೆ ಸಿಗುತ್ತಿತ್ತು. ಕಾರ್ತಿಕ ಮಾಸ ಕಳೆದೇ ಹೋಯಿತು. ಹಳ್ಳಿಯಲ್ಲಿ ಕೂಲಿ ಸಿಗದೆ ಬಹಳ ಕಷ್ಟವಾಯಿತು. ಈಗ ಹೋರಿಗೆ ಇದ್ದ ಒಂದೇ ಒಂದು ಆಧಾರ ಎಂದರೆ ಅದು ಅವನ ಗದ್ದೆಯಲ್ಲಿದ್ದ ಕಬ್ಬು ಮಾತ್ರ, ಆದರೆ ಹೋರಿಯ ಮನೆಯಲ್ಲಿ ತಿನ್ನಲು ಏನೂ ಇರಲಿಲ್ಲ. ಮನೆಯಲ್ಲಿ ಹುರಿದಿದ್ದ ಬಟಾಣಿ ತಿನ್ನುತ್ತಿದ್ದರು. ಒಂದೊಂದು ದಿನ ಪೂರ್ತಿಯಾಗಿ ಹಸಿದುಕೊಂಡೆ ಇರುತ್ತಿದ್ದರು.

ತನ್ನ ಮಗಳು ರೂಪ ತುಂಬಾನೆ ಹಸಿದುಕೊಂಡು ತನ್ನ ಚಿಕ್ಕಪ್ಪನ ಮನೆಯಲ್ಲಿ ಕೇಳಿ ತಿಂದು ಬರುತ್ತಿದ್ದಳು. ಅಂದರೆ ರೈತನ ಪರಿಸ್ಥಿತಿ ತನ್ನ ಹೆತ್ತ ಮಕ್ಕಳಿಗೂ ಅನ್ನ

ಹಾಕಲಾರದ ದುಃಸ್ಥಿತಿಯನ್ನು ಎಂಬುದನ್ನು ಹೋರಿರಾಮನ ಕುಟುಂಬದ ಮೂಲಕ ಅರಿಯಬಹುದಾಗಿದೆ.

ಹೋರಿಯು ಇಂತಹ ಪರಿಸ್ಥಿತಿಯಲ್ಲಿರುವಾಗ ಪಂಡಿತ ದಾತಾದೀನ ಬಂದು ತನ್ನ ಉಳಿಮೆ ಬಗ್ಗೆ ಕೇಳಿದ. ಆದರೆ ಹೋರಿಯಲ್ಲಿ ಭಯದ ಪರ್ವತವೇ ಇದ್ದರೂ ಹೋಗಿ ವಿಚಾರವನ್ನು ಕೇಳಿದನು. ದಂಡದಲ್ಲಿ ಆತನದು ಯಾವ ಪಾತ್ರವೂ ಇಲ್ಲ. ಅವನು ಸುಮ್ಮನೆ ಅಲ್ಲಿ ಬಂದು ಸೇರಿದ್ದ. ಉಳಿದವರು ಹೋರಿಯ ಮೇಲೆ ದಂಡವನ್ನು ಹಾಕಿದಾಗ 'ನಾನೇ ಕಡಿಮೆ ಮಾಡಿಸಿದೆ' ಎಂಬ ಸೋಗಿನ ಮಾತಿನೊಂದಿಗೆ ತಾನು ಒಳ್ಳೆಯವನು ಹಾಗೂ ಉಪಯೋಗ ಪಡೆದುಕೊಳ್ಳಲು ಹೋರಿಯ ಮುಂದೆ ಸಮರ್ಥನೆ ಮಾಡಿಕೊಳ್ಳುವನು.

ಹೋರಿಯ ಜಮೀನಿನ ಬಿತ್ತನೆಯ ಜವಾಬ್ದಾರಿಯನ್ನು ದಾತಾದೀನ ತೆಗೆದುಕೊಳ್ಳುವನು. ಜಮೀನಿನ ಫಸಲಿನಲ್ಲಿ ಇಬ್ಬರಿಗೂ ಅರ್ಧ ಅರ್ಧ ಪಾಲು ಎಂದು ಹೇಳುವನು. ಇದಕ್ಕೆ ಹೋರಿರಾಮನ ಒಪ್ಪಿಗೆ ಇತ್ತೊ ಇಲ್ಲವೊ ಎಂಬುದು ಅಲ್ಲಿ ಮುಖ್ಯವಾಗಿರಲಿಲ್ಲ. ಬದಲಾಗಿ ಪಂಡಿತನಾದ ದಾತಾದೀನ ಹೇಳಿದ ಮೇಲೆ ಮುಗಿಯಿತು.

ಹೋರಿ ಚಿಂತಾಕ್ರಾಂತನಾಗಿ ನಿಂತ. ತನ್ನ ಜಮೀನಿಗೆ ೪ ತಿಂಗಳು ಗೊಬ್ಬರ ಹಾಕಿ ಉತ್ತಿದ್ದಾನೆ. ಆದರೆ ಈಗ ಕೇವಲ ಬಿತ್ತನೆಗೆ ಅರ್ಧ ಪಾಲು ಎಂದರೆ ಕಷ್ಟದ ಕೆಲಸ. ಇಲ್ಲಿ ಶ್ರಮ ಮಾತ್ರ ಹೋರಿ ಹಾಗೂ ಆತನ ಕುಟುಂಬದವರದ್ದು. ಆದರೆ ಹೆಚ್ಚಿನ ಲಾಭ ಮಾತ್ರ ಪಂಡಿತನದ್ದು. ಅವನು ದೊಡ್ಡ ಉಪಕಾರ ಮಾಡುತ್ತಿರುವಂತೆ ನಾಟಕ ಮಾಡಿ ಹೋಗುವನು. ನಂತರ ಹೋರಿರಾಮನ ಮನೆಯಲ್ಲಿ ಊಟ ಇಲ್ಲದೇ ಉಪವಾಸ ಇರುತ್ತಾರೆ. ಆಗ ಪಂಡಿತ ಒಂದು ಮಣ ಜವೆಗೋಧಿಯ ಸಹಾಯ ಮಾಡುತ್ತಾನೆ. ಇಲ್ಲಿ ಧನಿಯಾ ತನ್ನ ಕರ್ಮವನ್ನು ನೆನೆದು ಅಳುತ್ತಾ ಗೋಧಿಯನ್ನು ಬೀಸುವಳು. ಹೊಲದ ಪಾಲುಗಾರಿಕೆ, ವ್ಯವಸಾಯದ ನೆಪದಲ್ಲಿ ಪಂಡಿತನ ಮಗ ಜುನಿಯಾಳನ್ನು ಮಾತನಾಡಿಸುವ ಹೊಂಚು ಹಾಕಿಕೊಂಡು ಬಂದು ಹೋಗುವ ಕೆಲಸ ಮಾಡುತ್ತಿದ್ದನು.

ಹೋರಿರಾಮನ ಹಳ್ಳಿಯಲ್ಲಿ ಸಕ್ಕರೆ ಕಾರ್ಖಾನೆ ಪ್ರಾರಂಭವಾಗಿತ್ತು. ಅದರ ಗುಮಾಸ್ತರು ಹಾಗೂ ದಳ್ಳಾಳಿಗಳು ಹಳ್ಳಿ ಹಳ್ಳಿಯಲ್ಲೂ ಸುತ್ತಾಡಿ ರೈತರ ಕಬ್ಬನ್ನು ಕೊಳ್ಳುತ್ತಿದ್ದರು. ಇದನ್ನು ಖನ್ನಾರವರು ಪ್ರಾರಂಭ ಮಾಡಿದ್ದರು. ಹಳ್ಳಿಯ ರೈತರೆಲ್ಲಾ ಸೇರಿ ಗುಮಾಸ್ತನನ್ನು ವಿಚಾರಿಸಿದರು. ಕಬ್ಬು ಮಾರುವುದರಿಂದ ಹಣ ಕಡಿಮೆ ಸಿಕ್ಕರೂ ಪರವಾಗಿಲ್ಲ. ಆದರೆ ತಕ್ಷಣ ಸಿಗುತ್ತದೆ ಎಂದು ರೈತರು ಮಾರಲು ಮುಂದಾದರು. ಕೈಗೆ ಬಂದ ಹಣದಿಂದ ಅನೇಕ ರೈತರು ತಮ್ಮ ತಮ್ಮ ಸಮಸ್ಯೆಗಳನ್ನು ತೀರಿಸಿಕೊಳ್ಳಲು ಯೋಜನೆಗಳನ್ನು ಹಾಕಿಕೊಂಡಿದ್ದರು.

ಹೋರಿರಾಮನು ತನ್ನ ಕಬ್ಬು ಮಾರಿದರೆ ನೂರು ರೂಪಾಯಿ ಸಿಗುತ್ತದೆ ಎಂದು ಲೆಕ್ಕಹಾಕಿದ್ದ. ಅದಕ್ಕೆ ಒಂದು ಸಾಮಾನ್ಯ ಎತ್ತಿನ ಜೊಡಿ ತೆಗೆದುಕೊಳ್ಳುವ ಬಯಕೆ ಅವನದು. ಆದರೆ ಸಾಲಗಾರರ ಭೀತಿಯಿಂದ ಯೋಚನೆ ಮಾಡುತ್ತಿದ್ದ. ಸಾಲ ತೀರಿಸಲು ಶುರು ಮಾಡಿದರೆ ಆ ನೂರು ರೂಪಾಯಿ ಬಡ್ಡಿ ಕೊಡಲು ಆಗುತ್ತಿರಲಿಲ್ಲ. ಆದರೆ ಕಬ್ಬನ್ನು ಮಾರಿದ ಹಣ ಸಿಗುತ್ತದೆಯೋ ಎಂಬ ಅನುಮಾನ ಹೋರಿಗೆ ಇತ್ತು.

ಹೋರಿ ಕಬ್ಬನ್ನು ಕಡಿಯಲು ತನ್ನ ಗದ್ದೆಗೆ ಹೋದ. ತನ್ನ ಸಹೋದರ ಶೋಭಾನು ಆ ಸಮಯದಲ್ಲಿ ಸಹಾಯಕ್ಕೆ ಬಂದಿದ್ದ. ಕುಟುಂಬದವರೆಲ್ಲ ಕಬ್ಬು ಕಡಿಯಲು ಮುಂದಾದರು. ಹೋರಿ ತನ್ನ ಹೊಲದಲ್ಲಿ ಕಬ್ಬು ಕಡಿಯುತ್ತಿರುವ ವಿಷಯ ಸಾಲಗಾರರಿಗೆ ತಿಳಿಯಿತು. ಆಗ ಅವರು ಹದ್ದುಗಳಂತೆ ಹೋರಿಯನ್ನು ಸುತ್ತುವರಿದರು. ಅವರು ಹೋರಿರಾಮನಲ್ಲಿ ತಮ್ಮ ಅಸಲು ಮತ್ತು ಬಡ್ಡಿಯನ್ನು ಕೇಳುತ್ತಾ, ಬೈಯ್ಯಲು ಪ್ರಾರಂಭಿಸಿದರು. ಆಗ ಹೋರಿರಾಮನು ಅಂಗಲಾಚಿ ಬೇಡಿಕೊಂಡನು. ಆದರೆ ಲೇವಾದೇವಿಯವರು ತಮ್ಮ ಸಾಲದ ಹಣವನ್ನು ಕೊಡಲೇಬೇಕು ಎಂದು ಮಂಡಾಟ ಮಾಡುತ್ತ ಹೋರಿಗೆ ತೊಂದರೆ ಮಾಡುವರು.

ಮಂಗರೂ, ದುಲಾರಿ ಹಾಗೂ ಝಿಂಗುರಿ, ದಾತಾದೀನ ಎಲ್ಲರು ಸೇರಿದ್ದರೂ ಅದರಲ್ಲಿ ಮಂಗರೂ ಹೋರಿಯನ್ನು ತನ್ನ ಸಾಲ ಕೇಳಿದನು. ನಂತರ 'ನಿನಗೆ ಸಾಲ ಕೊಟ್ಟಿದ್ದ ದಾನವಾಗಿಯಲ್ಲ, ಮೂರು ವರ್ಷ ಕಳೆದರೂ ಬಡ್ಡಿಯೂ ಇಲ್ಲ, ಅಸಲೂ ಇಲ್ಲ. ಆದರೆ ನನ್ನ ಹಣ ಜೀರ್ಣಿಸಿಕೊಂಡು ಬಿಡುತ್ತೇನೆ ಎಂಬುದಾದರೆ ನಾನು ನಿನ್ನ ಹೆಣದಿಂದ ಹಣ ವಸೂಲಿ ಮಾಡುತ್ತೇನೆ'[೮] ಎಂದು ಕ್ರೂರವಾಗಿ ಮಾತನಾಡುವನು.

ಹೀಗೆ ರೈತರನ್ನು ರಕ್ತ ಹೀರುವ ತಿಗಣೆಗಳಂತೆ ಸತ್ತಮೇಲೆಯೂ ಅವರನ್ನು ಶೋಷಣೆ ಮಾಡುವುದು ನಡೆದಿತ್ತು. ಇದು ಹೋರಿರಾಮನ ದುಃಖದ ಕಥೆ ಎಂದರೆ ತಪ್ಪಾಗಲಾರದು.

ಹೋರಿಯು ತನ್ನ ಕಬ್ಬು ಕಡಿದು ಕಾರ್ಖಾನೆಯಲ್ಲಿ ತೂಕ ಮಾಡಿಸಿದಾಗ ಅವನಿಗೆ ೧೨೦ ರೂಪಾಯಿ ಸಿಗುತ್ತದೆ. ಆದರೆ ಝಿಂಗಾರಿ ಸಿಂಹನು ದ್ವಾರ ಬಾಗಿಲಲ್ಲೆ ನಿಂತುಕೊಂಡು ತನಗೆ ಬರಬೇಕಾದ ಎಲ್ಲ ಹಣವನ್ನು ಬಡ್ಡಿ ಸಮೇತ ಮುರಿದುಕೊಂಡು ಇಪ್ಪತ್ತೈದು ರೂಪಾಯಿ ಹೋರಿಯ ಕೈಗೆ ಕೊಡುವನು. ಪ್ರಾಣ ಕಿತ್ತುಕೊಂಡವರಂತೆ ಹೋರಿ ಸಾಲಗಾರನ ಮುಖವನ್ನೆ ದುಃಖ ತುಂಬಿದ ಕಣ್ಣುಗಳಿಂದ ನೋಡುವನು. ಕೊನೆಗೆ ಈ ಹಣವನ್ನೂ ನೀವೆ ಇಟ್ಟುಕೊಳ್ಳಿ ಎಂದು ಆಸಕ್ತಿ ತೋರದೆ ಹೇಳುವನು.

ಆದರೆ ಝಿಂಗಾರಿ ಸಿಂಹ ಇಪ್ಪತ್ತೈದು ರೂಪಾಯಿಯನ್ನು ನೆಲದ ಮೇಲೆ ಎಸೆದು ಹೀಗೆ ಹೇಳಿದ. ಬೇಕಾದರೆ ತೆಗೆದುಕೊ ಇಲ್ಲವಾದರೆ ಇಲ್ಲೇ ಬಿಸಾಕು. ನಿನ್ನ ಮರ್ಜಿಯಿಂದ ಸಾವುಕಾರನ ಕೈಯಲ್ಲಿ ಬೈಯಿಸಿಕೊಂಡೆ ಎಂದು ಕೋಪಗೊಳ್ಳುವನು[೯].

ಹೋರಿರಾಮನು ಆ ಹಣವನ್ನು ತೆಗೆದುಕೊಂಡು ಹೊರಗೆ ಬಂದನು. ಆಗ ನೋಖೇರಾಮ ಗರ್ಜಿಸಲು ಆ ಹಣಮ್ನ ಅವನ ಕೈಯಲ್ಲಿಟ್ಟು ಬರಿಗೈಯಿಂದ ಮನೆ

ಕಡೆ ತಿರುಗಿದನು. ಬಂದ ಕಬ್ಬಿನ ಹಣವೆಲ್ಲಾ ಮನೆಗೆ ಬರುವುದರಲ್ಲಿ ಬರಿಗೈಯಾಗಿತ್ತು. ಆ ಎಲ್ಲಾ ಹಣವು ಸಾಲಗಾರರ ಪಾಲಾಗಿತ್ತು. ಈಗ ತನ್ನ ಮಕ್ಕಳಿಗೆ ಒಂದು ಆಣೆಯ ಸಿಹಿ ಸಹ ತಂದುಕೊಡಲಾಗದ ಸ್ಥಿತಿ ಹೋರಿಯದಾಗಿತ್ತು. ಮನೆಯಲ್ಲಿ ಹುರಿದ ಕಾಳುಗಳಿಂದ ಹಸಿವನ್ನು ತಣಿಸಿಕೊಂಡು, ಒಂದು ಭರವಸೆ ಮೂಡಿ ಕೊನೆಗೆ ಅದು ಹೋರಿ ಕೈಯಿಂದ ಜಾರಿದ ಮೇಲೆ ಧನಿಯಾಳ ಆಕ್ರೋಶ ದುಃಖದಿಂದ ಗಂಡನಿಗೆ ಬೈಗುಳ ಸುರಿಮಳೆ ಗೈಯ್ಯುವಳು.

ಈ ಕಾದಂಬರಿಯಲ್ಲಿ ಶ್ರೀಮಂತರು ರೈತರನ್ನು ಶೋಷಣೆ ಮಾಡುವುದಲ್ಲದೆ ಮಹಿಳೆಯರನ್ನೂ ಸಹ ಶೋಷಣೆ ಮಾಡುವುದು ಕಾಣುತ್ತದೆ. ಈ ಕಾದಂಬರಿಯಲ್ಲಿ ಜಾತಿ ಪದ್ಧತಿಯನ್ನು ಶ್ರೀಮಂತರೂ ತೋರಿದರು ಮಾನವೀತೆಯ ಹಿನ್ನೆಲೆಯಲ್ಲಿ ಸಂಬಂಧಗಳೂ ಬೆಳೆಯತೊಡಗುತ್ತವೆ. ಜುನಿಯಾಳು ಗೊಲ್ಲರ ವಿದವೆ ಹೆಣ್ಣು ಮಗಳು. ಇವಳು ಹಾಲು ಮಾರಲು ಅನೇಕ ಮನೆಗಳಿಗೆ ಹಾಗೂ ಪೇಟೆಗೆ ಹೋಗುವ ಸಂದರ್ಭದಲ್ಲಿ ಅವಳು ಎದುರಿಸುವ ಸಮಸ್ಯೆಗಳನ್ನು ಕಾಣುತ್ತೇವೆ.

ಶ್ರೀಮಂತ ಗಂಡಸರು ಅವಳನ್ನು ನೋಡುವ ದೃಷ್ಟಿಕೋನ ಹಾಗೂ ಮಾತನಾಡಿಸುವ ವಿಧಾನವು, ಅವಳನ್ನು ಲೈಂಗಿಕತೆಗೆ ಪ್ರಚೋದಿಸುವಂತೆ ಇರುವುದು. ಹಾಲು ಕೊಡಲು ಹೋದಾಗ ಮನೆಯ ಹೆಣ್ಣು ಮಕ್ಕಳು ಹೊರಗಡೆ ಹೋದಾಗ ಜುನಿಯಾಳ ಮೇಲೆ ಬಲತ್ಕಾರ ಪ್ರಯತ್ನ ಮಾಡುವುದು. ಅವಳನ್ನು ಗೋಳಾಡಿಸುವುದು, ಶ್ರೀಮಂತರು ಹಾಗೂ ದೊಡ್ಡವರು ಮಾಡುವ ಈ ರೀತಿಯ ವರ್ತನೆಗಳಿಗೆ ಯಾವ ದಂಡ, ಅವಮಾನ ದೊರೆಯದೆ ಈ ರೀತಿಯಲ್ಲಿಯೇ ಮುಂದುವರೆದು ಬಡ ಹೆಣ್ಣುಮಕ್ಕಳ ಶೋಷಣೆಯನ್ನು ಮಾಡುತ್ತಾರೆ.

ಹೊಟ್ಟೆಪಾಡಿಗಾಗಿ ಬದುಕುವುದು ಕಷ್ಟದ ಪರಿಸ್ಥಿತಿ ಹೆಣ್ಣು ಮಕ್ಕಳದ್ದಾಗಿದೆ. ಬಡವರ ನೈತಿಕತೆಯನ್ನು ಕಬಳಿಸುವ ಸಂಚು ಶ್ರೀಮಂತರದ್ದಾಗಿದೆ. ಹೀಗೆ ಜುನಿಯಾಳನ್ನು ಶ್ರೀಮಂತರು ಶೋಷಣೆಗೆ ಒಳಪಡಿಸುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದು.

'ಫಾಲ್ಗುಣ ತನ್ನ ಜೋಳಿಗೆಯಲ್ಲಿ ನವಜೀವನದ ಐಶ್ವರ್ಯವನ್ನು ತುಂಬಿಕೊಂಡು ಬಂದು ಸೇರಿತ್ತು. ಮಾವಿನ ಮರಗಳು ಎರಡೂ ಕೈಯಿಂದ ಮಾವಿನ ಹೂವುಗಳ ಸುವಾಸನೆಯ್ನು ಹಂಚುತ್ತಿದ್ದವು. ಹಾಗೂ ಕೋಗಿಲೆ ಮಾವಿನ ಕೊಂಬೆಗಳಲ್ಲಿ ಅವಿತುಕೊಂಡು ಸಂಗೀತದ ಗುಪ್ತದಾನ ನೀಡುತ್ತಿತ್ತು'[೧೦].

ಹಳ್ಳಿಯಲ್ಲಿ ವ್ಯವಸಾಯದ ಗೀಳು ಪ್ರಾರಂಭವಾಗಿತ್ತು. ಎಲ್ಲರೂ ಕಬ್ಬು ನೆಡುವುದರಲ್ಲಿ ಮಗ್ನರಾಗಿದ್ದರು. ಹೋರಿ, ಧನಿಯಾ, ರೂಪಾ ಹಾಗೂ ಸೋನಾ ಮೂವರು ಗದ್ದೆಯಲ್ಲಿ ಕೆಲಸ ಮಾಡುತ್ತಿದ್ದರು. ಹೋರಿ ಕಬ್ಬನ್ನು ಕಡಿಯುತ್ತಿದ್ದನು. ಹೆಂಡತಿ, ಮಕ್ಕಳು ಕೆರೆಯಿಂದ ನೆನೆದಿದ್ದ ಕಬ್ಬಿನ ಕಟ್ಟುಗಳನ್ನು ತೆಗೆದುಕೊಂಡು ಗದ್ದೆಗೆ ತರುತ್ತಿದ್ದರು. ಹೋರಿ ಮತ್ತು ಆತನ ಕುಟುಂಬ ದಾತಾದೀನನ ಕೂಲಿಗಳಾಗಿದ್ದರು.

ಹೋರಿ ರೈತನಲ್ಲ. ಎಲ್ಲವನ್ನು ಕಳೆದುಕೊಂಡಿರುವ ಕೂಲಿಯಾಗಿದ್ದ. ದಾತಾದೀನನು ತನ್ನ ಹಿಂದಿನ ಸಿಟ್ಟನ್ನು ಹೋರಿಯ, ಮೇಲೆ ತೀರಿಸುವಂತೆ ಜೋರು ಮಾಡುತ್ತಿದ್ದನು. ಅವನನು ಬೈಯ್ಯುವನು, ಅವಮಾನ ಮಾಡುವನು. ಪಂಡಿತನು ಮಾತನಾಡಿದ್ದು ಹೋರಿಯ ಅಭಿಮಾನಕ್ಕೆ ಪೆಟ್ಟು ತಗಲುತ್ತದೆ.

ದಾತಾದೀನನು ಕೂಲಿಯವರಿಂದ ನಿರ್ದಾಕ್ಷಿಣ್ಯವಾಗಿ ಕೆಲಸ ತೆಗೆದುಕೊಳ್ಳುತ್ತಿದ್ದ. ಕೂಲಿಗಳು ಇವನ ಹತ್ತಿರ ಬಹಳ ದಿನಗಳವರೆಗೆ ಕೆಲಸ ಮಾಡದೇ ಹೋಗುತ್ತಿದ್ದರು. ಆದರೆ ಹೋರಿಗೆ ಬೇರೆ ಗತಿ ಇಲ್ಲದೆ ಇವನ ಹತ್ತಿರ ಕೆಲಸ ಮಾಡಲು ಒಪ್ಪಿಕೊಂಡಿದ್ದನು.

ಹೋರಿರಾಮನಿಗೆ ನಾಲ್ಕು, ಐದು ತಿಂಗಳಿನಿಂದ ಹೊಟ್ಟೆ ತುಂಬ ಊಟ ಸಿಕ್ಕಿರಲಿಲ್ಲ. ಅದರಲ್ಲಿ ಮಾನಸಿಕ ಚಿಂತೆ, ಯಾತನೆಯಿಂದ ನೊಂದಿದ್ದನು. ದಾತಾದೀನನ ಮಾತುಗಳಿಂದ ಕೋಪಗೊಂಡು ಜೋರಾಗಿ ಕಬ್ಬುಗಳನ್ನು ಚೂರು ಚೂರು ಮಾಡಲು ಶುರು ಮಾಡಿದ. ಆದರೆ ಪ್ರತಿದಿನ ಒಂದು ಹೊತ್ತು ಹುರಿಗಾಳನ್ನು ತಿಂದು ಬರುವ ಶಕ್ತಿಯು ಇವರ ರಭಸದ ಕೆಲಸಕ್ಕೆ ಅವನೊಳಗೆ ಬೆಂಕಿ ಎದ್ದಿತು. ಅವನಲ್ಲಿ ಅಲೌಕಿಕ ಶಕ್ತಿ ಬಂದುಬಿಟ್ಟಿತ್ತು. ತಲ ತಲಾಂತರಗಳಿಂದ ಅವನಲ್ಲಿ ಸಂಚಿತವಾದ ಗೌರವ ಈಗ ಮಾಯವಾಗಿ ಹೋಗಿತ್ತು. ಅವನ ಕೈಗಳು ದಣಿಯದೆ ಸ್ವಲ್ಪವೂ ನಿಲ್ಲದೆ ಯಂತ್ರದಂತೆ ಏಳುತ್ತಿತ್ತು. ಒಮ್ಮಿಂದೊಮ್ಮೆಲೆ ಅವನ ಕಣ್ಣಿನ ಮುಂದೆ ಗಾಡಾಂಧಕಾರ ಕವಿಯಿತು. ಮೂರ್ಛೆಹೋಗುವನು.

ಹೋರಿಯ ಮೇಲೆ ಅಲ್ಲದೆ ಧನಿಯಾಳ ಮೇಲೂ ದೌರ್ಜನ್ಯವನ್ನು ಹಾಗೂ ಬೈಗುಳನ್ನು ಸುರಿಸಿದನು. ಇದನ್ನೆಲ್ಲಾ ನೋಡಿ ಹೋರಿ ತನ್ನ ಆತ್ಮಗೌರವಕ್ಕೆ ಪೆಟ್ಟುಬಿದ್ದು ಹಸಿವಿನಿಂದ ಕಂಗಾಲಾಗಿದ್ದ. ಎಲ್ಲವೂ ಸೇರಿ ಅವನನ್ನು ನೆಲಕ್ಕೆ ಉರುಳಿಸಿತ್ತು. ಧನಿಯಾ ಜೋರಾಗಿ ಅಳಲು ಪ್ರಾರಂಭಿಸಿ ತನ್ನ ಗಂಡನಿಗೆ ಏನು ಆಯಿತು ಎಂದು ಗಾಭರಿಯಿಂದ ಹೋರಿಯ ತಲೆಯನ್ನು ತೊಡೆಯ ಮೇಲೆ ಇರಿಸಿಕೊಂಡು ಗೋಳಾಡಲು ಪ್ರಾರಂಭಿಸಿದಳು. ಅತ್ತು ಕರೆದು ದುಃಖಿಸಿದಳು.

ಹೋರಿಯನ್ನು ನೀರಿನಿಂದ, ಮುಖ ತೊಳೆದ ನಂತರ ಪ್ರಜ್ಞೆ ಬಂದ ಮೇಲೆ ಗಂಡನನ್ನು ವಿಚಾರಿಸಿದಳು. ಹೋರಿ ನೋವಿನಿಂದ ತನ್ನ ಹೆಂಡತಿಗೆ ಹೇಳಿದ. ಇನ್ನು ಯಾವ ಸುಖಕ್ಕೆ ನನ್ನನ್ನು ಬದುಕಿಸಿಕೊಳ್ಳಲು ಆಸೆ ಪಡುತ್ತಿಯಾ ಎಂದು ಹೆಂಡತಿಗೆ ಯಾವುದೇ ಆಸಕ್ತಿ ಇಲ್ಲದವನಂತೆ ನುಡಿದನು.

ಹೋರಿಯು ಮೊದಲು ಎಲ್ಲರಿಗೂ ಕುಲಸಂಬಂಧಿಯಾದ ರೈತ. ಎಲ್ಲವನ್ನು ಕಳೆದುಕೊಂಡ ಮೇಲೆ ಸಿಗುವ ಬೆಲೆ ಇದೇ ಹಸಿವಿನಲ್ಲಿ ಬೆಂದರೂ ಆತ್ಮಾಭಿಮಾನದಿಂದ ಜೀವನ ನಡೆಸುವನು. ಯಾರ ಹತ್ತಿರವೂ ಏನನ್ನೂ ಬೇಡದ ಇವನು ಎಲ್ಲವನ್ನೂ ಇವನ ಹತ್ತಿರ ಕಿತ್ತುಕೊಂಡರೂ ಕೊನೆಗೆ ಹೋರಿಯನ್ನು ನಿರ್ಗತಿಕನಂತೆ ಮಾಡಿದ ಶ್ರೀಮಂತರು ಇವರು.

ಇಡೀ ಹೋರಿಯ ಕುಟುಂಬ ಮೂಕ ಎತ್ತಿನಂತೆ ದುಡಿದು ದಣಿದು ಅತ್ತು ಕರೆದು ನೊಂದುಬೆಂದು ಹೋಗಿತ್ತು. ಎಲ್ಲವನ್ನು ಸಹಿಸಿಕೊಂಡು ನೈತಿಕತೆಯನ್ನು ಬಿಡದೆ ಜೀವನ ಸಾಗಿಸಿಕೊಂಡು ಬಂದಿಧ್ಧಾರೆ. ಆದರೆ ಈಗ ಯಜಮಾನನ ಮಾತು ಹೋರಿಯ ಅಂತರಂಗದಲ್ಲಿ ನಾಟಿ ಕೋಲಾಹಲವನ್ನೆ ಎಬ್ಬಿಸಿ ಆತಂಕವನ್ನು ಉಂಟುಮಾಡಿದವು. ಸಂಬಂಧಗಳು ಹಣವಿದ್ದರೆ ಮಾತ್ರ, ಹಣವಿಲ್ಲದವನು ಇಲ್ಲಿ ಹೆಣಕ್ಕೆ ಸಮಾನನಂತೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಶೋಭಾನೂ ಸಹ ಶ್ರೀಮಂತರಿಂದ ಶೋಷಣೆಗೆ ಒಳಗಾಗಿರುವುದು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಹೋರಿಯ ತಮ್ಮ ಶೋಭಾನು, ಪಟೇಶ್ವರಿಯ ಹತ್ತಿರ ಸಾಲ ಮಾಡಿದ್ದನು. ಕಬ್ಬು ಕಡಿದು ಮಾರಿ ಹಣ ತೆಗೆದುಕೊಂಡು ಹೊರಗೆ ಬರುವಾಗ ಪಟೇಶ್ವರಿಯು ಹಣ ಕೇಳುವನು. ಶೋಭನು ಅದಕ್ಕೆ ತಿರುಗಿಬಿದ್ದು ಹಣ ಇಲ್ಲವೆಂದು ಹೇಳುವನು. ಆದರೆ ಪಟೇಶ್ವರಿ ಸಿಟ್ಟಿಗೆದ್ದು ಹೀಗೆ ಹೇಳಿದ. ಕಬ್ಬು ಮಾರಿದೆಯೋ ಇಲ್ಲವೋ ಎಂದು ವಾದಿಸುವನು. ಶೋಭಾ ತನ್ನ ಮಕ್ಕಳುಮರಿಗೆ ಹಾಗೂ ಸಂಸಾರವನ್ನು ನೋಡಿಕೊಳ್ಳುವ ಆಸೆ ಈತನಿಗಿತ್ತು. ಆದರೆ ಪಟೇಶ್ವರಿ ಕೋಪಿಸಿಕೊಂಡು ಹೀಗೆ ಹೇಳುವನು. 'ನೀನು ಹಣ ಕೊಟ್ಟೇ ಕೊಡುತ್ತಿಯಾ. ಕೈ ಮುಗಿದುಕೊಂಡಿರ್ತಿಯಾ. ಒಂದು ರಿಪೋರ್ಟನ್ನು ಕೊಡುತ್ತೇನೆ. ನೀನು ಆರು ತಿಂಗಳು ಜೈಲಿಗೆ ಹೋಗುತ್ತಿಯಾ ಎಂದು ಹೆದರಿಸುವನು. ನಾನು ಜಮೀನ್ದಾರ ಅಥವಾ ಸಾಲ ಕೊಡುವ ಸಾಹುಕಾರನ ನೌಕರನಲ್ಲ. ನಾನು ಘನತೆವೆತ್ತ ಸರಕಾರದ ನೌಕರ. ಆ ಸರಕಾರ ಯಾವುದು ಅಂತ ಗೊತ್ತಿದೆ ತಾನೆ. ನಿನ್ನ ಸಾಲ ಕೊಟ್ಟ ಸಾಹುಕಾರ ಹಾಗೂ ಜಮೀನ್ದಾರ ಇವರಿಬ್ಬರಿಗೂ ಒಡೆಯ ನಾನು'[11] ಎಂದು ಪಟೇಶ್ವರನು ಎದುರಿಸಿ ತನ್ನ ಅಧಿಕಾರದ ಬಗ್ಗೆ ವಿವರಿಸುವನು.

ಶೋಭಾನು ಬಹಳ ದುಃಖದಿಂದ ಅಣ್ಣನ ಹತ್ತಿರ ತನ್ನ ಸಾಲದ ಬಗ್ಗೆ ಚರ್ಚೆ ಮಾಡುವನು. ಮತ್ತೆ ಕೊನೆಗೆ ದೊಡ್ಡವರನ್ನು ಎದುರು ಹಾಕಿಕೊಂಡು ಬದುಕಲು ತುಂಬ ಕಷ್ಟ. ಹಳ್ಳಿಯಲ್ಲಿ ನೆಮ್ಮದಿಯ ಬದುಕು ಸಿಗುವುದಿಲ್ಲ ಎಂದು ಭಯದಿಂದ ಹೋರಿಯ ಕೈಯಲ್ಲಿ ತನ್ನ ಸಾಲದ ಹಣವನ್ನು ಪಟೇಶ್ವರಿಗೆ ಕೊಟ್ಟು ಕಳಿಸುವನು. ಶ್ರೀಮಂತರನ್ನು ಎದುರು ಹಾಕಿಕೊಂಡು ಜೀವನ ನಡೆಸುವುದು ಅಷ್ಟು ಸುಲಭವಲ್ಲ. ಅವರ ಅಣ್ಣನ ಪರಿಸ್ಥಿತಿಯನ್ನು ಕಂಡು ಶೋಭಾ ಗಾಬರಿಯಿಂದ ತನ್ನ ಕುಟುಂಬದ ಒಳಿತಿಗೋಸ್ಕರ ಸಾಲ ಕೊಡದೆ ಇದ್ದನು. ಆದರೆ ತನ್ನ ಸಂಸಾರದ ಗತಿ ಏನಾದರೇನು ಎಂದು ಮನಸ್ಸನ್ನು ಗಟ್ಟಿ ಮಾಡಿಕೊಂಡು ಸಾಲ ಹಿಂತಿರುಗಿಸಲು ಮುಂದಾಗುವನು.

ಶ್ರೀಮಂತರ ವಿರುದ್ಧ ನಿಂತರು ಅದಕ್ಕೆ ಹಣ ಬೆಂಬಲವೂ, ಅಧಿಕಾರ ಬೆಂಬಲವೂ ಇರಬೇಕು. ಆದರೆ ಬಡವರಿಗೆ ಎರಡೂ ಇಲ್ಲ. ಆದ್ದರಿಂದ ಅವರು ಹೇಳಿದಂತೆ ಇರುವುದು ಬದುಕಿಗೆ ಒಂದು ಒಳ್ಳೆಯ ದಾರಿಯೆಂದು ತಿಳಿದು ಎಲ್ಲವನ್ನೂ ತೊರೆದು ಸಾಲ ಹಿಂತಿರುಗಿಸಲು ಸಿದ್ಧನಾಗುವನು. ಹೀಗೆ ಹಳ್ಳಿಯಲ್ಲಿ ಎಲ್ಲಾ ರೈತರು

ತಮ್ಮ ಜೀವನ ನಡೆಸಲು ತುಂಬ ಕಷ್ಟ ಅನುಭವಿಸುತ್ತಿದ್ದರು. ಹಾಗೆ ಎಲ್ಲರೂ ಸಾಲದ ಹೊರೆಯನ್ನು ಹೊತ್ತವರೇ ಆಗಿದ್ದರು.

ಹೋರಿರಾಮನ ನೋವಿನ ಕತೆಯಲ್ಲಿ ಇವನ ಜೀವನ ಹೋರಾಟದಲ್ಲಿ ಇನ್ನೊಂದು ಸಮಸ್ಯೆ ಉಂಟಾಗುವುದು. ಅದು ಅವನ ಎರಡನೆಯ ಮಗಳು ರೂಪಾಳ ಮದುವೆ. ಹಳ್ಳಿಯ ಪಂಡಿತ ದಾತಾದೀನನು, ಒಬ್ಬ ಲೇವಾದೇವಿ ವ್ಯಾಪಾರಿಯಾದ ರಾಮ ಸೇವಕನಿಗೆ ಕೊಟ್ಟು ಮದುವೆ ಮಾಡುವಂತೆ ಸಲಹೆ ನೀಡುವನು. ರಾಮ ಸೇವಕ ನಲವತ್ತು ವಯಸ್ಸಿನ ವ್ಯಕ್ತಿ. ಈತನಿಗೆ ಮದುವೆ ಆಗಿ ಹೆಂಡತಿ ತೀರಿದ್ದಳು. ಇವನಿಗೆ ಆಸ್ತಿ ಪಾಸ್ತಿ ಇದ್ದು ಇವನು ಹಾಗೂ ಉತ್ತಮ ಸ್ಥಿತಿಯಲ್ಲಿ ಇದ್ದನು. ಪಂಡಿತ ತನ್ನ ಉಪಯೋಗದ ದೃಷ್ಟಿಯನ್ನು ಇಟ್ಟುಕೊಂಡು ದಾತಾದೀನನು ಹೋರಿರಾಮನ ಮಗಳ ಮದುವೆ ಮಾತುಕತೆ ಹಾಗೂ ಹೋರಿಯ ಸಾಲ ತೀರಿಸಲು ಅನುಕೂಲವಾಗುವಂತೆ ಈ ಮದುವೆಯ ಸಿದ್ಧತೆಯನ್ನು ಮಾಡುವಂತೆ ಪ್ರಚೋದಿಸುವನು.

ಈ ಮದುವೆಯು ಹೋರಿರಾಮನಿಗೂ ಹಾಗೂ ಧನಿಯಾಳಿಗೂ ಇಷ್ಟವಿರಲಿಲ್ಲ. ಆದರೂ ಅವರ ಆರ್ಥಿಕ ಪರಿಸ್ಥಿತಿ ತುಂಬ ಚಿಂತಾಜನಕವಾಗಿತ್ತು. ಮನೆಯನ್ನು ಕಳೆದುಕೊಳ್ಳುವ ಪರಿಸ್ಥಿತಿ ಹಾಗೂ ಹೊಲದ ಮೇಲೆ ವಾಜ್ಯ ಹೂಡಲಾಗಿತ್ತು. ಆದ್ದರಿಂದ ಅವರು ಬಡತನದ ಸಮಸ್ಯೆಯಲ್ಲಿ ಬೆಂದು ಬೆಂದು ಬೇಸತ್ತಿದ್ದರೂ ಕೊನೆಗೆ ಮಗಳು ಸುಖವಾಗಿಯಾದರೂ ಇರುತ್ತಾಳೆ ಎಂಬ ಎಲ್ಲಾ ವಿಚಾರಗಳನ್ನು ಮಾಡಿ ರೂಪಾಳನ್ನು ರಾಮಸೇವಕನಿಗೆ ಕೊಟ್ಟು ಮದುವೆ ಮಾಡಿ ತನ್ನ ತಲೆಯ ಮೇಲಿನ ಹೊರೆಯನ್ನು ಇಳಿಸಿಕೊಳ್ಳುವನು. ಮತ್ತು ತನ್ನ ಮನೆ, ಜಮೀನನ್ನು ಸಹ ಬಿಡಿಸಿಕೊಳ್ಳುವನು. ಆದರೆ ಅವನ ಮನಸ್ಸಲ್ಲಿ ರಾಮಸೇವಕನಿಂದ ಹಣ ಪಡೆದದ್ದು ತುಂಬ ಕಳವಳವನ್ನುಂಟು ಮಾಡಿತ್ತು. ಹೋರಿರಾಮ ತನ್ನ ಅಳಿಯನ ಹಣವನ್ನು ಒಂದು ಕಾಸು ಬಿಡದಂತೆ ಕೂಲಿ ಮಾಡಿಯಾದರೂ ತೀರಿಸಬೇಕು ಎಂಬ ದೃಢವಾದ ನಿರ್ಧಾರ ಮಾಡಿಕೊಳ್ಳುವನು. ಹಾಗೂ ಇನ್ನೊಂದು ಹಸು ತೆಗೆದುಕೊಳ್ಳಲು ಹಣ ಜೋಡಿಸಲು ಮುಂದಾಗುವನು. ಮನೆಯಲ್ಲಿ ಮೊಮ್ಮಗನ ಸಲುವಾಗಿ ಆದರೂ ಹಸು ಕೊಂಡುಕೊಳ್ಳುವ ಆಸೆ ಹೋರಿರಾಮನದ್ದಾಗಿತ್ತು.

ಅದೇ ವೇಳೆಗೆ ಒಬ್ಬ ಕಂಟ್ರಾಕ್ಟುದಾರ ರಸ್ತೆ ಮಾಡಲು ಹಳ್ಳಿಗೆ ಬಂದನು. ಬರಡು ನೆಲದಲ್ಲಿ ಅಗೆತದ ಕೆಲಸ ಶುರುಮಾಡಿಸಿದ. ಆ ಕೆಲಸಕ್ಕೆ ಹೋರಿರಾಮ ಸಿದ್ಧನಾದ. ಅಲ್ಲಿ ಹೋರಿರಾಮನಿಗೆ ಎಂಟು ಆಣೆ ಕೂಲಿಯಂತೆ ಅಗೆತ ಶುರುಮಾಡಿದರು. ಹೋರಿರಾಮ ಮನಸ್ಸಿನಲ್ಲಿಯೇ ಲೆಕ್ಕ ಹಾಕಿದ. ಎರಡು ತಿಂಗಳು ಈ ಕೆಲಸ ನಡೆದರೆ ಒಂದು ಹಸುವಿಗೆ ಬೇಕಾಗುವಷ್ಟು ಹಣ ತನ್ನ ಕೈಗೆ ಬರುತ್ತದೆ. ನಂತರ ಹಸು ತರುವುದಾಗಿ ಮನದಲ್ಲಿಯೇ ಲೆಕ್ಕಾಚಾರ ಹಾಕಿದನು.

ಇಡೀ ಹಗಲು ಆ ಉರಿ ಬಿಸಿಲಿನಲ್ಲಿ ಕೆಲಸ ಮಾಡಿ ಅವನು ಮನೆಗೆ ಬರುತಿದ್ದನು. ಮನೆಗೆ ಬಂದಾಗ ಅವನ ಮುಖದಲ್ಲಿ ವಿಶ್ರಾಂತಿ ಇಲ್ಲದೆ ಶಕ್ತಿ

ಇಲ್ಲದವನಂತೆ ಕಾಣುತ್ತಿದ್ದ. ಆದರೆ ಅವನಲ್ಲಿ ಉತ್ಸಾಹ ಮಾತ್ರ ಕುಂದಿರಲಿಲ್ಲ. ರಾತ್ರಿ ಮನೆಗೆ ಬಂದ ಮೇಲೆ ಊಟ ಮಾಡಿ ಮತ್ತೆ ದೀಪದ ಬೆಳಕಿನಲ್ಲಿ ನಲೂ ನೂಲುತ್ತಿದ್ದ ಸುಮಾರು ರಾತ್ರಿ ಹನ್ನೆರಡು ಅಥವಾ ಒಂದು ಗಂಟೆಯ ಹೊತ್ತಿಗೆ ಮಲಗುತ್ತಿದ್ದ. ಮತ್ತೆ ಕೆಲಸಕ್ಕೆ ಹೋಗುತ್ತಿದ್ದ. ಇದನ್ನು ಕಂಡು ಧನಿಯಾಳಿಗೆ ತುಂಬ ಭಯವಾಗುತ್ತಿತ್ತು. ಆಕೆ ತನ್ನ ಗಂಡನಿಗೆ ಬುದ್ಧಿ ಹೇಳುತ್ತಿದ್ದಳು ಹಾಗೂ ಗಂಡನೊಂದಿಗೆ ಅವಳು ನೂಲುತ್ತಿದ್ದಳು. ಹೋರಿರಾಮನ ಮನಸ್ಸಿನಲ್ಲಿ ಎರಡು ವಿಷಯಗಳಿವೆ. ಒಂದು ಹಸುವನ್ನು ತರುವುದು ಎರಡನೆಯದು ರಾಮಸೇವಕನ ಹಣವನ್ನು ತೀರಿಸುವುದು. ತನ್ನ ಮಗನ ಮೇಲೆ ಯಾವುದೇ ಹೊರೆ ಹಾಕದೆ ತಾನೇ ಸಾಲ ತೀರಿಸಲು ಶ್ರಮ ಪಡುವನು.

ಹೋರಿಯಿಂದ ದೂರವಾಗಿದ್ದ ಹೀರ ಮತ್ತೆ ಅಣ್ಣನ ಮುಂದೆ ಬಂದು ನಿಲ್ಲುವನು. ಶೋಭಾನು ಹೋರಿಯ ಬೆಂಬಲಕ್ಕೆ ನಿಂತಿದ್ದಾನೆ. ತನ್ನ ತಮ್ಮಂದಿರು ಏನೇ ಮಾಡಿದರೂ ಅದನ್ನು ಕ್ಷಮಿಸಿ ಅವರನ್ನು ಪ್ರೀತಿಯಿಂದ ಅಕ್ಕರೆಯಿಂದ ಹತ್ತಿರ ಕರೆದುಕೊಳ್ಳುವ ಅಂತಃಕರಣ ಉಳ್ಳ ವ್ಯಕ್ತಿ ಇಲ್ಲಿ ಹೋರಿರಾಮನಾಗಿದ್ದಾನೆ.

ಹೋರಿರಾಮ ಉರಿಬಿಸಿನಲ್ಲಿ ಕಷ್ಟಪಟ್ಟು ಕೆಲಸಮಾಡಲು ಮುಂದಾದನು. ಬಿಸಿಲು ತುಂಬ ಇತ್ತು. ಹತ್ತು ಗಂಟೆಯ ಬಿಸಿಲು ತುಂಬ ಗಾಡವಾಗಿ ಭೂಮಿಯನ್ನು ಅಪ್ಪಳಿಸುತ್ತಿತು. ಮಧ್ಯಾನದ ಹೊತ್ತಿಗೆ ಬೆಂಕಿಯನ್ನೇ ಸುರಿಸುತ್ತಿತ್ತು. ಹೋರಿ ಮಕ್ಕರಿಯಲ್ಲಿ ಕಲ್ಲುಗಳನ್ನು ಹೊತ್ತುಕೊಂಡು ರಸ್ತೆಗೆ ತಂದು ಗಾಡಿಗೆ ತುಂಬುತ್ತಿದ್ದ. ಮದ್ಯಾನ ಅವನಿಗೆ ವಿರಾಮ ಸಿಕ್ಕಾಗ ಬಳಲಿದ್ದ. ಇಂತಹ ಬಳಲಿಕೆ ಅವನಿಗೆ ಹಿಂದೆಂದೂ ಆಗಿರಲಿಲ್ಲ. ಅವನ ಕಾಲು ಮೇಲಕ್ಕೆ ಏಳುತ್ತಿರಲಿಲ್ಲ. ಒಳಗಡೆ ಮೈಸುಟ್ಟು ಹೋಗುತ್ತಿತ್ತು. ಅವನು ಸ್ನಾನವನ್ನು ಮಾಡಿರಲಿಲ್ಲ. ಹುರಿದ ಕಾಳುಗಳನ್ನೂ ಕೂಡ ತಿಂದಿರಲಿಲ್ಲ. ಆ ಬಳಲಿಕೆಯಲ್ಲೇ ತನ್ನ ಅಂಗವಸ್ತ್ರವನ್ನೇ ಹಾಸಿಕೊಂಡು ಒಂದು ಮರದ ಕೆಳಗೆ ಮಲಗಿಬಿಟ್ಟ, ಆದರೆ ಬಾಯಾರಿಕೆಯಿಂದಾಗಿ ಅವನ ಗಂಟಲು ಒಣಗುತ್ತಿತ್ತು. ನಂತರ ಅವನು ವಾಂತಿ ಮಾಡಿಕೊಂಡ. ಹೋರಿಯ ತಲೆ ಸುತ್ತುತ್ತಾ ಇತ್ತು. ಅವನಿಗೆ ಸಾವು ಹತ್ತಿರ ಬಂತು ಎಂಬ ಸೂಚನೆಗಳು ಕಾಣುತ್ತಿದ್ದವು.

ಇದನ್ನು ತಿಳಿದ ಹಳ್ಳಿಯ ಜನರು ಹೋರಿಯನ್ನು ಮನೆಯ ಹತ್ತಿರ ಕರೆದುಕೊಂಡು ಬಂದು ಮಂಚದ ಮೇಲೆ ಮಲಗಿಸಿದರು. ಅವನಿಗೆ ಜ್ಞಾನ ಇರಲಿಲ್ಲ. ಧನಿಯಾ ಇದನ್ನು ನೋಡಿ ದುಃಖ ಉಕ್ಕಿಬಂದರೂ ಗಂಡನನ್ನು ಮಾತನಾಡಿಸಿದಳು. 'ನನ್ನ ಕಡೆ ನೋಡಿ, ನಾನು, ನನ್ನ ಗುರುತು ಸಿಗಲಿಲ್ಲವೇ?'[೧೨] ಎಂದು ಕೇಳುವಳು.

ಹೋರಿಗೆ ಪ್ರಜ್ಞೆ ಬಂದರೂ ಸಾವಿನ ಕೊನೆಯ ಮೆಟ್ಟಿನಲ್ಲಿ ನಿಂತಿದ್ದಾನೆ. ಕಣ್ಣಿನಲ್ಲಿ ನೀರು ತುಂಬಿಕೊಂಡು, ತಾನು ಇದುವರೆಗೆ ಮಾಡಿದ ತಪ್ಪುಗಳನ್ನು ಹಾಗೂ ಮಾಡಿದ ಅವಮಾನಗಳನ್ನು, ಅವಳ ಜೊತೆ ನಡೆದುಕೊಂಡಿದ್ದ ವಿಷಯಗಳಿಗೆ ಕ್ಷಮಿಸುವಂತೆ ಕೇಳಿಕೊಳ್ಳುವನು. ಈ ಸಂದರ್ಭದಲ್ಲಿ ಊರಿನ ಜನ ಹಾಗೂ ಹೋರಿಯ ತಮ್ಮಂದಿರಾದ ಶೋಭಾ, ಹೀರಾ ಎಲ್ಲರೂ ಬಂದರೂ, ಧನಿಯಾಳು ದುಃಖದಲ್ಲಿ

ಮುಳುಗಿದ್ದಳು. ಸಾವು ಖಚಿತವೆಂದು ತಿಳಿದ ಮೇಲೆ ಹೀರಾ, ಶೋಭಾ ತಮ್ಮ ಅತ್ತಿಗೆಗೆ ಅಳುತ್ತಾ ಧೈರ್ಯದ ಮಾತು ಹೇಳಿ 'ಅಣ್ಣನ ಕೈಯಿಂದ ಗೋದಾನ ಮಾಡಿಸಿ ಬಿಡಿ. ಅಣ್ಣ ಹೊರಟು ಬಿಟ್ಟರು' ಎಂದು ಹೇಳುವನು. ಇದರಿಂದ ಧನಿಯಾಳಿಗೆ ಮತ್ತಷ್ಟು ದುಃಖ ಮರುಕಳಿಸಿತು. ಅವಳು ತಿರಸ್ಕಾರದ ನೋಟ ಬೀರುತ್ತ ತನ್ನ ಗಂಡನಿಗೆ ಕರ್ಮ ಮಾಡುವುದನ್ನು ಬೇರೆಯವರು ಹೇಳಬೇಕೆ. ತನ್ನ ಸಂಗಾತಿಯಾದವರಿಗೆ ತಾನು ಮಾಡುವ ಧರ್ಮ ಗೊತ್ತಿಲ್ಲವೆ ಎಂಬುದು ಆಕೆಯ ನೋಟದ ದುಃಖದಲ್ಲಿ ತುಂಬಿತ್ತು. ಊರಿನ ಜನರು ಸಹ ಇದೆ ವಿಷಯವನ್ನೆ ಹೇಳಿದ್ದರು.

ಧನಿಯಾಳಿಗೆ ದುಃಖವನ್ನು ತಡೆಯಲು ಆಗಲಿಲ್ಲ. ಅವಳಿಗೆ ಪ್ರಪಂಚವೇ ಮುಳುಗಿ ಹೋದಂತೆ (ಭಾವನೆಗಳು ಇಲ್ಲವೇ) ಆಯಿತು. ಧನಿಯಾಳು ತಾನು ನೂಲು ಮಾರಿದ್ದರಿಂದ ಬಂದಿದ್ದ ಇಪ್ಪತ್ತು ಆಣೆ ದಾತಾದೀನನ ಕೈಗೆ ತನ್ನ ಗಂಡನಿಂದ ಕೊಡಿಸಿದಳು. ನಂತರ ದಾತಾದೀನನಿಗೆ 'ಬುದ್ದಿ ನಮ್ಮ ಮನೆಯಲ್ಲಿ ಆಕಳೂ ಇಲ್ಲ, ಕರುವೂ ಇಲ್ಲ. ನಮ್ಮಲ್ಲಿ ಇಷ್ಟೇ ದುಡ್ಡಿದೆ. ಇದೇ ಈ ನನ್ನ ದೇವರಿಗಾಗಿ ಕೊಡುವ ಗೋದಾನ!'[೧೩] ಎಂದು ಪ್ರಜ್ಞೆ ತಪ್ಪಿ ಬೀಳುವಳು.

ಗೋದಾನ ಕಾದಂಬರಿಯ ಉದ್ದಕ್ಕೂ ಹೋರಿರಾಮನು ಒಡೆಯರ ಶೋಷಣೆಯ ಬಲೆಯಲ್ಲಿ ಸಿಲುಕಿಕೊಂಡು ಕೊನೆಯವರೆಗೂ ಶೋಷಣೆಯನ್ನು ಅನುಭವಿಸಿಕೊಂಡು ಬರುತ್ತಾನೆ. ಸಾಯುವ ಕ್ಷಣದಲ್ಲಿ ಸಮಾಜದ ನೀತಿ ನಿಯಮಗಳಿಗೆ ಅನುಸಾರವಾಗಿಯೇ ಪ್ರಾಣವನ್ನು ಬಿಡುವನು. ಇಷ್ಟಾದರೂ ಹೋರಿರಾಮ ಎಲ್ಲೂ ಆತ್ಮವಿಮರ್ಶೆ ಮಾಡಿಕೊಳ್ಳುವುದಿಲ್ಲ. ಆಗ ನಿರಾಸೆಗೊಳ್ಳದೆ ಅಸಹಾಯಕತೆನ್ನು ತೋರದೆ ಬದುಕನ್ನು ವ್ರತದಂತೆ ನಿಭಾಯಿಸಿಕೊಂಡು ಬರುತ್ತಾನೆ.

ಗೋದಾನ ಕಾದಂಬರಿಯಲ್ಲಿ ಈ ರೀತಿಯ ಭೂಮಾಲೀಕರ ಮತ್ತು ಗೇಣಿದಾರರ ಸಂಬಂಧವನ್ನು ಗುರುತಿಸಬಹುದು. ಇಲ್ಲಿ ರೈತನ ಶೋಷಣೆಯೇ ಪ್ರಮುಖ ಅಂಶವಾಗಿ ಕಂಡುಬರುತ್ತದೆ. ಹಾಗೆಯೇ ಶ್ರೀಮಂತರ, ಬಡವರ ನಡುವಿನ ಸಂಬಂಧವೂ ಕೇವಲ ವ್ಯಾಪಾರದ ದೃಷ್ಟಿಯಲ್ಲಿ ನಡೆಯುತ್ತದೆ. ಶ್ರೀಮಂತರು ತಮ್ಮ ಅನುಕೂಲಕ್ಕೆ ತಕ್ಕಂತೆ ಬಡವರನ್ನು ನಡೆಸಿಕೊಳ್ಳುವುದು ಅವರದೇ ಆದ ನೀತಿಯನ್ನು ಪಾಲಿಸುವುದು ಕಂಡುಬರುತ್ತದೆ.

ಬಡವನ ಕೋಪ ದವಡೆಗೆ ಮೂಲ ಎಂಬಂತೆ ಇಲ್ಲಿ ಬಡವ ಮಾತನಾಡುವ ಹಾಗೇ ಇಲ್ಲ. ಶ್ರೀಮಂತರು ಮಾಡಿದ ಆಜ್ಞೆಯನ್ನು ಮೀರಿ ನಡೆಯುವುಂತಿಲ್ಲ. ಒಂದು ವೇಳೆ ಮೀರಿ ನಡೆದರೆ ಕೂಡಲ್ಲೇ ಅವರು ಮಾಡಿದ ಪದ್ಧತಿಗಳಿಗೆ ರೈತನು ಬದ್ಧನಾಗಿರಬೇಕಾಗುತ್ತದೆ. ಇಲ್ಲಿ ಬಡವನ ಕಷ್ಟ ನಷ್ಟಗಳನ್ನು ಎಲ್ಲ ಶ್ರೀಮಂತರು ಲೆಕ್ಕಿಸುವುದಿಲ್ಲ. ಬಡವರ ಶ್ರಮವನ್ನು ಅವರ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದನ್ನೆ ಕಾಣಬಹುದು.

**ಕೊನೆ ಟಿಪ್ಪಣಿ**

೧. ಪುಟ ೨೩

೨. ಪುಟ ೨೫

೩. ಪುಟ ೧೩೬

೪. ಪುಟ ೨೪೭

೫. ಪುಟ ೩೩

೬. ಪುಟ ೧೫೩

೭. ಪುಟ ೧೬೭

೮. ಪುಟ ೨೪೪

೯. ಪುಟ ೨೪೫

೧೦. ಪುಟ ೨೭೧

೧೧. ಪುಟ ೨೪೯

೧೨. ಪುಟ ೪೭೭

೧೩. ಪುಟ ೪೭೮

## ಅಧ್ಯಾಯ ೩

## ಗೋದಾನ ಕಾದಂಬರಿಯಲ್ಲಿ ಹೆಣ್ಣು ಗಂಡಿನ ಸಂಬಂಧಗಳು

ಗೋದಾನ ಕಾದಂಬರಿಯಲ್ಲಿ ಹೆಣ್ಣು ಹಾಗೂ ಗಂಡಿನ ಸಂಬಂಧಗಳನ್ನು ಬಹಳ ಸಹಜವಾಗಿ ನಿರೂಪಿಸಲಾಗಿದೆ. ಕಾದಂಬರಿಯ ಸ್ತ್ರೀ ಪಾತ್ರಗಳು ಸಾಮಾಜಿಕ ನೆಲೆಯಲ್ಲಿ ಕುಟುಂಬದ ನಿರ್ವಹಣೆ, ತಾಳ್ಮೆ ಹಾಗೂ ಸಹನೆ ಎಲ್ಲವನ್ನು ನಿಭಾಯಿಸಿಕೊಂಡು ಹೋಗುವ ಪಾತ್ರಗಳಾಗಿ ನಿಲ್ಲುತ್ತವೆ. ಅದೇ ರೀತಿ ಪುರುಷ ಪಾತ್ರಗಳ ಚಿತ್ರಣವೂ ಅಷ್ಟೆ. ಹೋರಿರಾಮನ ಚಿತ್ರಣ ಭಾರತೀಯ ರೈತರ ಪ್ರತೀಕವಾಗಿ ನಿಲ್ಲುತ್ತದೆ. ನೈತಿಕತೆಯ ಹಿನ್ನೆಲೆಯಲ್ಲಿ ನ್ಯಾಯ, ಧರ್ಮದ ಚೌಕಟ್ಟಿನಲ್ಲಿ ಸಾಮಾಜಿಕ ಕಟ್ಟುಪಾಡುಗಳಿಗೆ ಬದ್ದನಾಗಿ, ಶ್ರೀಮಂತರ ಆಜ್ಞೆಗಳಿಗೆ ಮರು ಮಾತನಾಡದ ಪಾತ್ರಗಳು ಬಡವರಲ್ಲದೆ ಶ್ರೀಮಂತರ ಹೆಣ್ಣು ಗಂಡಿನ ಚಿತ್ರಣವೂ, ಸಂಬಂಧವೂ ಚಿತ್ರಿತವಾಗಿದೆ.

ಇಡೀ ಕಾದಂಬರಿಯಲ್ಲಿ ಎಲ್ಲಾ ವರ್ಗದ ಗಂಡು ಹೆಣ್ಣಿನ ಚಿತ್ರಣವನ್ನು ಹಾಗೂ ಪಾತ್ರಗಳ ವೈಶಿಷ್ಟ್ಯಗಳನ್ನು ಸೃಜನಶೀಲವಾಗಿ ನಿರೂಪಿಸಲಾಗಿದೆ. ಹಾಗೆಯೆ ಬಡವರ ಹೆಣ್ಣು ಗಂಡುಗಳ ಚಿತ್ರಣ ಹಾಗೂ ಇವರ ಸಂಬಂಧಗಳ ವೈಶಿಷ್ಟ್ಯಗಳನ್ನು ಸಹ ಆಯಾ ಪಾತ್ರಗಳ ಸ್ವಭಾವ ಸಮೇತ ಇದರಲ್ಲಿ ನಿರೂಪಿಸಲಾಗಿದೆ.

ಕಾದಂಬರಿಯಲ್ಲಿ ನಿರೂಪಿತವಾಗಿರುವ ಹೆಣ್ಣು ಗಂಡಿನ ಸಂಬಂಧಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ.

೧. ಕೌಟುಂಬಿಕ ನೆಲೆಯ ಸಂಬಂಧಗಳು

೨. ಸಾಮಾಜಿಕ ನೆಲೆಯ ಸಂಬಂಧಗಳು

### ೧. ಕೌಟುಂಬಿಕ ನೆಲೆಯ ಸಂಬಂಧಗಳು

ಹೋರಿರಾಮ ಈ ಕಾದಂಬರಿಯಲ್ಲಿ ಬರುವ ಬಡರೈತ. ಈತನ ಹೆಂಡತಿ ಧನಿಯಾ. ಇವರು ಸಹಬಾಳ್ವೆಯ ಹಾಗೂ ಅನ್ಯೋನ್ಯ ದಂಪತಿಗಳು. ಇವರು ಪ್ರೀತಿ, ವಿಶ್ವಾಸ ಹಾಗೂ ನಂಬಿಕೆಯಿಂದ ಜೀವನ ಸಾಗಿಸುವರು. ಈ ಅನ್ಯೋನ್ಯ ಸಂಬಂಧದಲ್ಲಿ ಸಣ್ಣ ಬಿರುಕು ಕಾಣಿಸಿಕೊಳ್ಳುತ್ತದೆ. ಈ ಬಿರುಕು ಇವರಿಬ್ಬರ ವೈಯಕ್ತಿಕ ಆಸೆ, ಅಭೀಪ್ಸೆಯಿಂದಲೊ ಇಲ್ಲವೆ ವೈಯಕ್ತಿಕ ತೆವಲಿನಿಂದಲೋ ಉಂಟಾಗುವುದಿಲ್ಲ. ಆದರೆ ಈ ಬಿರುಕು ಶುರುವಾಗುವುದು ಕುಟುಂಬದ ಹೊರಗಿರುವ ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳಿಂದ. ಇವರು ಶ್ರಮದಲ್ಲಿ ಜೀವನ ನಡೆಸಿದವರು. ಸಂಸಾರವನ್ನು ಇಬ್ಬರೂ ಜವಾಬ್ದಾರಿಯಿಂದ ಸಾಗಿಸುವ ಕಾರ್ಯವನ್ನು (ನಿಯತ್ತಿನಿಂದ) ಉತ್ತಮ ನಿಟ್ಟಿನಲ್ಲಿ ನಿರ್ವಹಿಸುವರು. ಬಡತನದಲ್ಲಿ ಇದ್ದರೂ ಚಿಂದಿಬಟ್ಟೆ ತೊಟ್ಟರೂ, ಅರ್ಧ ಹೊಟ್ಟೆಗೆ ತಿಂದರೂ ಇವರು ನೈತಿಕತೆ ಬಿಟ್ಟವರಲ್ಲ. ಧರ್ಮವನ್ನು ತ್ಯಜಿಸಿದವರಲ್ಲ. ಹಸಿವಿನಲ್ಲೂ ಬದುಕುವ ಛಲವನ್ನು ಹೊಂದಿ ಮುಂದೆ ಸಾಗುವರು. ಇಬ್ಬರೂ ನ್ಯಾಯಕ್ಕಾಗಿ, ಸಂಬಂಧಗಳಿಗಾಗಿ ಹಾಗೂ ತಮ್ಮ ಗೌರವಕ್ಕಾಗಿ ಬಾಳುವರು. ಎಷ್ಟೆ

ತೊಂದರೆಗಳು ಇದ್ದರೂ ಗಂಡನ ಕ್ಷೇಮ ಹಾಗೂ ಆತನ ಒಳಿತಿಗಾಗಿ ತಮ್ಮ ಸಂಸಾರವನ್ನು ಧನಿಯಾ ನಿಭಾಯಿಸುವಳು. ಹೆಂಡತಿ ಜಗಳಗಂಟಿಯಾದರೂ ಅವಳು ಅವನನ್ನು ನಾನಾ ಮಾತುಗಳಿಂದ ಬೈದರೂ, ಆ ಕ್ಷಣಕ್ಕೆ ಅವಳನ್ನು ದೂಷಿಸಿ ಕೊನೆಗೆ ಹೆಂಡತಿ ಎಂಬ ಪ್ರೀತಿಯನ್ನು ನೆನೆದು, ಅವಳನ್ನು ಅಕ್ಕರೆಯಿಂದ ಕಾಣುವ ಗಂಡ. ಇಬ್ಬರೂ ಸಂಸಾರದ ಚುಕ್ಕಾಣಿಯನ್ನು ಹಿಡಿದು, ಇಬ್ಬರೂ ಕುಟುಂಬವನ್ನು ಸಮರ್ಥವಾಗಿ ನಡೆಸುವ ಕಾರ್ಯಕ್ಕೆ ಪಾತ್ರರಾಗಿರುತ್ತಾರೆ.

ಹೋರಿರಾಮನು ಪ್ರೀತಿಯಿಂದ ಗೇಲಿ ಮಾಡುವ ಧನಿಯಾ ವ್ಯವಹಾರವನ್ನು ತಿಳಿದವಳಲ್ಲ. ಇಬ್ಬರದೂ ೨೦ ವರ್ಷದ ವೈವಾಹಿಕ ಜೀವನ. ಗೇಣಿ ವಿಷಯಕ್ಕೆ ಇಬ್ಬರಿಗೂ ಪ್ರತಿದಿನ ಜಗಳವಾಗುತ್ತಲೆ ಇತ್ತು. ಧನಿಯಾಳಿಗೆ ಹೋರಿಯನ್ನು ಮದುವೆಯಾದ ದಿನದಿಂದ ಯಾವ ಸುಖವೂ ದೊರೆತಿರಲಿಲ್ಲ. ಇವಳಿಗೆ ೩೬ ವರ್ಷ. ಹೋರಿರಾಮನಿಗೆ ೪೦ ವರ್ಷ ವಯಸ್ಸು. ಈ ದಂಪತಿಗಳು ಕಷ್ಟದಿಂದಾಗಿ ಕಡಿಮೆ ವಯಸ್ಸಾದರೂ ಮುದುಕರಂತೆ ಕಾಣುತ್ತಾರೆ.

ಇಬ್ಬರೂ ಪ್ರೀತಿಯಿಂದ ಮಾತನಾಡುವರು. ಧನಿಯಾ ಹೋರಿ ಕೇಳಿದ ಸಾಮಾನಗಳನ್ನು ತಂದು ಕೊಟ್ಟ ಕೂಡಲೆ ಹೋರಿ 'ಅವಳನ್ನು ಕುಕ್ಕುವಂತೆ ನೋಡುತ್ತ ಹೇಳಿದನು. ನಾನೇನು ಮಾವನ ಮನೆಗೆ ಹೋಗುತ್ತಿದ್ದಿನಾ? ಐದನ್ನು ತಂದಿಟ್ಟೀಯಲ್ಲ? ಮಾವನ ಮನೆಗೆ ಹೋಗಿ ತೋರಿಸಲು ಅಲ್ಲೇನು ಹರೆಯದ ನಾದಿನಿಯೇನೂ ಕುಳಿತಿಲ್ಲವಲ್ಲ. ಹೋರಿಯ ಕಪ್ಪಾದ ಸುಕ್ಕುಗಟ್ಟಿದ ಮುಖದಲ್ಲಿ ಮಂದಹಾಸದ ಮಾರ್ದವತೆ ಮಿಂಚಿತು. ಅದಕ್ಕೆ ಧನಿಯಾ ನಾಚುತ್ತಾ ಹೇಳಿದಳು. 'ಅಹುದು ಅಹುದು. ನೀವು ಬಹಳ ಚಲೋ ಇದ್ದೀರಲ್ಲಾ ಪಾಪ ನಾದಿನಿ ನಿಮ್ಮ ಹಿಂದೆ ಬೀಳಲು'[7] ಎಂದು ಮಾತುಕತೆ ನಡೆಸಿ ಅವರ ಕೆಲಸಗಳಿಗೆ ತೆರಳುವರು.

ಧನಿಯಾ ಹಾಗೂ ಆಕೆಯ ಮೈದುನ ಹೀರಾನ ನಡುವೆ ಜಗಳ ನಡೆದ ಸಂದರ್ಭದಲ್ಲಿ ಹೋರಿಗೆ ತುಂಬ ಕೋಪ ಬರುತ್ತದೆ. ಇಬ್ಬರೂ ತುಂಬ ಜಗಳಕ್ಕೆ ನಿಲ್ಲುವರು. ಹೀರಾನೂ ಸಹ ಜೋರಾಗಿಯೇ ಜಗಳ ಮಾಡಿದನು. ಹಾಗೂ ಧನಿಯಾಳು ಸಹ ತುಂಬ ಒರಟಾಗಿ ಮಾನಾಡಿದಳು. ಊರಿನ ಜನರೆಲ್ಲಾ ಬುದ್ಧಿ ಹೇಳಿದರೂ ಕೇಳಲಿಲ್ಲ. ಹೋರಿಗೆ ಸಾಕಾಯಿತು. ಸುಮ್ಮನಿರು ಅಂದರೂ ಸುಮ್ಮನಿರಲಿಲ್ಲ. ಧನಿಯಾಳು ಅಷ್ಟು ಒರಟಾಗಿ ನಿಷ್ಠುರವಾಗಿ ನಡೆದುಕೊಳ್ಳಲು ಒಂದು ಕಾರಣ ಸಹ ಇತ್ತು. ಹೋರಿ ಹಸು ತಂದ ಬಗ್ಗೆ ಹೀರಾ ಮತ್ತು ಶೋಭಾನ ನಡುವಿನ ಮಾತುಕತೆಯನ್ನು ಕೇಳಿ ತುಂಬಾ ಬೇಸರಗೊಂಡು (ಗಂಡನ ಬಗ್ಗೆ ಅಷ್ಟು ಹಗುರವಾಗಿ ಕೆಟ್ಟದಾಗಿ ಮಾತನಾಡಿದ ವಿಚಾರ) ಹೋರಿರಾಮ ಹಸುವನ್ನು ಹಿಂದಿರುಗಿಸಲು ಹೋದಾಗ ತನ್ನ ತಮ್ಮಂದಿರು ಅವರಿಗೆ ಮೋಸ ಮಾಡಿ ಹಣವನ್ನು ಮುಚ್ಚಿಟ್ಟುಕೊಂಡು ಹಸು ತಂದಿದ್ದಾಗಿ ಹೇಳುತ್ತಿದ್ದಾರೆ. ಅದಕ್ಕಾಗಿ ಹಸುವನ್ನು ಹಿಂದಿರುಗಿಸುತ್ತೇನೆ ಎಂದು ಹೋರಿ ಹಠ ಮಾಡಿದ. ಆಗ ಧನಿಯಾ ತನ್ನ ಗಂಡ ಉಪವಾಸವಿದ್ದು ಅವರನ್ನು ಸಾಕಿ

ಸಲುಹಿ ಅವರಿಗೆ ಮದುವೆ ಮಾಡಿ ಜೀವನದಲ್ಲಿ ಸಾಲದ ಹೊರೆಯನ್ನು ಹೊತ್ತು ಹಸು ತಂದರೂ, ಈ ಅಣ್ಣ ಅತ್ತಿಗೆಯ ಬಗ್ಗೆ ಕೆಟ್ಟದಾಗಿ ಮಾತನಾಡಿದ್ದಕ್ಕೆ ಕೆಂಡಾಮಂಡಲವಾಗಿ ಹೀರಾನ ಮೇಲೆ ಜಗಳದ ಪಣ ತೊಡುವಳು. ಹೋರಿ ಅವಳನ್ನು ತಡೆದರೂ ಅವಳು ಹಠ ಮಾಡಿದಳು ಹಾಗೂ ಹೋರಿ ಅವಳ ಮೇಲೆ ಬೇಸರಗೊಂಡರೂ ಅವಳ ಬಗ್ಗೆ ಆತನಿಗೆ ಅಭಿಮಾನ ಪ್ರೀತಿ ಇತ್ತು.

ಜಗಳ ನಡೆಯುತ್ತಿದ್ದಾಗ ಧನಿಯಾಳಿಗೆ ಹಳ್ಳಿಯ ಜನರು ಬೈಯ್ಯುವರು. ಗಂಡನ ಬಗ್ಗೆ ಯಾರೂ ಹಗುರವಾಗಿ ಕೆಟ್ಟದ್ದಾಗಿ ಅವಮಾನ ಮಾಡಬಾರದು ಎಂಬುದು ಧನಿಯಾಳದ್ದು. ತನ್ನ ಗಂಡ ಇಡೀ ಜೀವನವನ್ನು ಮುಡುಪಾಗಿಟ್ಟು ಸಾಕಿ ಸಲುಹಿದವರನ್ನು ಕುರಿತು ಇಷ್ಟು ಹಗುರವಾಗಿ ಮಾತನಾಡಿದ್ದಕ್ಕೆ ಕೋಪಗೊಂಡು ಅಂತಹ ಕಾರ್ಯಕ್ಕೆ ಇಳಿದಳು.

ಧನಿಯಾಳಿಗೆ ಗಂಡನ ಮೇಲೆ ಅಪಾರ ಪ್ರೀತಿ ಇತ್ತು. ಅವಳು ಆತನ ಬಗ್ಗೆ ಕಾಳಜಿ ವಹಿಸಿ ಸಂಸಾರವನ್ನು ನೀಗಿಸಲು ಬೆಂಬಲ ಕೊಡುವಳು. ಪೆದ್ದಿಯಾದರೂ ಇವಳ ಮಾನವೀಯತೆ ಗೌರವ ಅಭಿಮಾನ ಹೊಂದಿರುವ ಹೆಣ್ಣಾಗಿ ಈ ಕಾದಂಬರಿಯಲ್ಲಿ ನಿರೂಪಿತವಾಗಿದ್ದಾಳೆ.

ಹೋರಿಯ ಹಸುವನ್ನು ಹೀರಾನು ಯಾರಿಗೂ ಗೊತ್ತಾಗದಂತೆ ಕೊಂದು ಹಾಕಿದ ಮೇಲೆ, ಅದು ಹೋರಿಗೆ ತಿಳಿದ ಮೇಲೆ, ಹೋರಿಯ ಕುಟುಂಬದವರು ನೋವಿನ ಮಡುವಿನಲ್ಲಿ ಮುಳುಗಿದರು. ಹಸು ಸತ್ತ ಮೇಲೆ ಧನಿಯಾಳಿಗೆ ಕೋಪ ತಡೆದುಕೊಳ್ಳಲಾಗದೆ ಹೀರಾನ ಜೊತೆ ತುಂಬನೇ ಜಗಳ ಮಾಡುವಳು. ಹೋರಿ ಧನಿಯಾಳನ್ನು ಚಚ್ಚುತ್ತಿದ್ದ. ಧನಿಯಾ ಅವನನ್ನು ಬಾಯಿಗೆ ಬಂದ ಹಾಗೆ ಬೈಯ್ಯುತ್ತಿದ್ದಳು. ಇಬ್ಬರೂ ಹೆಣ್ಣು ಮಕ್ಕಳೂ ತಂದೆಯ ಕಾಲನ್ನು ಹಿಡಿದುಕೊಂಡು ಜೋರಾಗಿ ಕಿರುಚುತ್ತಿದ್ದರು. ಹಾಗು, ಗೋಬರನು ತಾಯಿಯ ರಕ್ಷಣೆಗೆ ಧಾವಿಸುತ್ತಿದ್ದ. ಪದೇ ಪದೇ ಹೋರಿಯ ಕೈಯನ್ನು ಹಿಡಿದುಕೊಂಡು ಹಿಂದಕ್ಕೆ ತಳ್ಳುತ್ತಿದ್ದ. ಆದರೆ ಧನಿಯಾಳ ಬಾಯಿಂದ ಬೈಗುಳ ಹೊರಟಿದ್ದೆ ತಡ ಹೋರಿ ತನ್ನ ಕೈ ಬಿಡಿಸಿಕೊಂಡು ಅವಳಿಗೆ ಒಂದೆರಡು ಏಟು ಹೊಡೆದು ಕಾಲಿನಿಂದ ಒದೆಯುತ್ತಿದ್ದ.

'ದಾತಾದೀನ ಹಾಗು ಊರಿನ ಜನರು ಎಲ್ಲರೂ ಸೇರಿ ಹೋರಿರಾಮನಿಗೆ ಹೊಡೆಯಬೇಡ ಎಂದು ಬುದ್ದಿ ಹೇಳಿದರು. ಅವಳು ಹಠದಿಂದ ಹೋರಿಯ ತಮ್ಮನನ್ನು ದೂಷಿಸುತ್ತಿದ್ದಳು. ಅವನಿಗೆ ಶಿಕ್ಷೆ ವಿಧಿಸಲೇಬೇಕು ಎಂದು ಹೇಳುತ್ತಿದ್ದಳು. ಹೋರಿ ಸಾಲ ಮಾಡಿ ತಂದ ಹಸುವನ್ನು ಅನ್ಯಾಯವಾಗಿ ಸಾಯಿಸಿದರೂ ನನ್ನ ಗಂಡನಿಗೆ ಅನ್ಯಾಯ ಮಾಡಿದರು. ದ್ವೇಷದಿಂದ ಹಸುವಿಗೆ ವಿಷ ಹಾಕಿ ಸಾಯಿಸಿದ್ದಕ್ಕೆ ತುಂಬ ನೋವಿನಿಂದ ದೂಷಿಸುವಳು. ಇದಕ್ಕೆ ಹೋರಿಯು, 'ಅವನು ನನ್ನ ತಮ್ಮ ಸುಮ್ಮನಿರು. ಸತ್ತ ಹಸು ಹಿಂದಕ್ಕೆ ಬರುವುದಿಲ್ಲ. ನನ್ನ ತಮ್ಮನಿಗೆ ಶಿಕ್ಷೆ ಆಗುತ್ತೆ ಸುಮ್ಮನಿರು. ಅವನು ಬೇರೆ ಅಲ್ಲ. ,ನನ್ನ ತಮ್ಮ. ಯಾರೇ ಏನೇ ಅಂದರೂ, ಏನೇ

ಮಾಡಿದರೂ ರಕ್ತ ಸಂಬಂಧ ಕಡಿದು ಬೀಳುವುದಿಲ್ಲ' ಎಂದು ಸಮಾಧಾನ ಹೇಳುವನು. ಅವಳು ಮಾತ್ರ ಹಸು ಹೋಗಿದ್ದಕ್ಕೆ ತುಂಬ ನೋವು ಮಾಡಿಕೊಂಡು ಅತ್ತು ಕರೆಯುತ್ತಿದ್ದಳು. ಪಂಚರು ಸೇರಿ ಹಸುವಿಗೆ ವಿಷ ಇಟ್ಟಿದ್ದು ಯಾರು ಹೇಗೆ ಆಯಿತು ಎಂಬುದನ್ನು ತಿಳಿಯಲು ಎಲ್ಲರನ್ನೂ ಕರೆದು ವಿಚಾರಿಸಿದರು. ಹೋರಿ ನನಗೆ ಏನೂ ಗೊತ್ತಿಲ್ಲ ಎಂದು ಹೇಳುವನು. ಅದಕ್ಕೆ ಧನಿಯಾಳಿಗೆ ಕೋಪ ಬಂದು ವದರಲು ಸುರು ಮಾಡಿದಳು. 'ನಿಮ್ಮ ತಮ್ಮನನ್ನು ಪ್ರೀತಿಯಿಂದ ಸಾಕಿ ಅವನ ತಪ್ಪುಗಳನ್ನು ಏಕೆ ಹೇಳುತ್ತಿರಿ ಮುಚ್ಚಿ ಇಟ್ಟುಕೊಳ್ಳಿರಿ'[3] ಎಂದು ಹೇಳಿದಳು. ಪಂಚರೆಲ್ಲ ಸೇರಿ ಆಣೆಮಾಡಿ ಹೇಳು ಎಂದು ಕೇಳಿದಾಗ 'ಹೀರಾ ಹಸುವಿನ ಗೊತ್ತಿನ ಹತ್ತಿರ ನಿಂತಿದ್ದನ್ನು ನಾನು ನೋಡಲಿಲ್ಲ. ನಾನು ಆಣೆ ಇಡುತ್ತೇನೆ' ಎಂದು ಹೇಳಿ, ಮಗನ ತಲೆಯ ಮೇಲೆ ನಡುಗುತ್ತ ಕೈಯಿಟ್ಟು ಆಣೆ ಮಾಡಿದನು.

ಆಗ ಧನಿಯಾ ನೆಲಕ್ಕೆ ಉಗುಳಿ ಹೇಳಿದಳು. 'ನಿನ್ನ ಸುಳ್ಳಿಗೆ ಧಿಕ್ಕಾರ. ನೀನು ನನ್ನ ಹತ್ತಿರ ಹೇಳಲಿಲ್ಲವೆ. ಹೀರಾ ಗೊತ್ತಿನ ಹತ್ತಿರ ಕಳ್ಳನಂತೆ ನಿಂತಿದ್ದ ಎಂದು. ಈಗ ತಮ್ಮನ ಪರ ವಹಿಸಿಕೊಂಡು ಸುಳ್ಳು ಹೇಳುತ್ತಿದ್ದಿಯಲ್ಲಾ! ನಿನ್ನ ಸುಳ್ಳಿಗೆ ಬೆಂಕಿ ಹಾಕಿ ಬಿಡುತ್ತೇನೆ'[4] ಎಂದು ಬೈಯ್ಯುವಳು.

ಹೋರಿ ತನ್ನ ತಮ್ಮನ ಮನೆ ಬೇರೆಯಲ್ಲ. ತನ್ನ ಮನೆ ಬೇರೆಯಲ್ಲ. ಹೀರಾನಿಗೆ ತೊಂದರೆಯಾಗುತ್ತದೆ. ಹಾಗೂ ಅವನ ಮನೆ ಜಪ್ತಿ ಮಾಡುತ್ತಾರೆ ಎಂದು ಹೆದರಿ ತಮ್ಮನ ಹೆಸರು ಹೇಳಲು ನಿರಾಕರಿಸುವನು. ಇದನ್ನು ವಿರೋಧಿಸಿದ ಧನಿಯಾಳನ್ನು ಚನ್ನಾಗಿ ಹೊಡೆದು ಬಡಿದು ಕೆಡುವುತ್ತಿದ್ದ. ಪಂಚರೆಲ್ಲ ಸೇರಿ ಹೋರಿಯ ಕೈಯಿಂದ ೫೦ ರೂಪಾಯಿಗಳ ಲಂಚವನ್ನು ಕೊಡು ಇಲ್ಲವಾದರೆ ಹೀರಾನ ಮನೆ ಜಪ್ತಿ ಮಾಡುತ್ತೇವೆ. ಹೇಗಾದರೂ ಮಾಡಿ ಹಣ ಹೊಂದಿಸು ಎನ್ನುವರು. ಹೀರಾನ ಮನೆಯಲ್ಲಿ ಏನೂ ಇರಲಿಲ್ಲ. ಹೋರಿಗೆ ದಂಡ ಹಾಕಿದರೆ ೫೦/೧೦೦ ರೂಪಾಯಿ ಸಿಗಬಹುದೆಂದು ಇವನಿಗೆ ಸಾಲ ಮಾಡಿ ಹಣ ಕೊಡು ಎಂದು ಹೇಳುವರು.

ಸಾಲವನ್ನು ತೆಗೆದುಕೊಂಡು ಹೋರಿಯು ದರೋಗದವರ ಕಡೆಗೆ ಹೆಜ್ಜೆ ಹಾಕಿದ. ಒಮ್ಮಿಂದೊಮ್ಮೆಲೆ ಧನಿಯಾ ಸಿಡಿದೆದ್ದು ಬಂದು ಒಂದೇ ಏಟಿಗೆ ಅಂಗವಸ್ತ್ರವನ್ನು ಅವನ ಕೈಯಿಂದ ಕಿತ್ತುಕೊಂಡಳು. ನೀವು ಹಣ ವಾಪಸ್ಸು ಕೊಟ್ಟು ಬರಬೇಕು ಎಂದು ಗಂಡನಿಗೆ ಹೇಳಿ, ಆ ಹಣವನ್ನು ದರೋಗದವರಿಗೆ ಸಿಗದಂತೆ ಮಾಡುವಳು. ಇದರಿಂದ ಹೋರಿಗೆ ತುಂಬನೇ ಕೋಪ ಹಾಗೂ ಬೇಸರವಾಗುತ್ತದೆ.

ಧನಿಯಾಳು ಮಾಡದ ತಪ್ಪಿಗೆ ಸಾಲಮಾಡಿ ಹಣವನ್ನು (ದಂಡವಾಗಿ) ಕಟ್ಟುವುದು ಸರಿ ಎನಿಸಲಿಲ್ಲ. ಆದ್ದರಿಂದ ಎಲ್ಲಾ ಪಂಚರು ಗಾಬರಿಯಾಗುವಂತೆ ಮಾಡಿ ಎಲ್ಲರನ್ನೂ ಬೈದು ಮನೆಗೆ ಹಿಂತಿರುಗಿದಳು.

ಹೋರಿ ಪುನ್ನಿಯ ಗದ್ದೆಗಾಗಿ ಬೇಸಾಯ ಮಾಡುವುದನ್ನು ಕಂಡು ಧನಿಯಾ ಏನೂ ಹೇಳುತ್ತಿರಲಿಲ್ಲ. ಹೋರಿಯ ಬಗ್ಗೆ ಅವಳಿಗೆ ಯಾವ ವಿರಕ್ತಿ ಉಂಟಾಗಿರಲಿಲ್ಲ. ಪುನ್ನಿಯ ಬಗ್ಗೆ ದಯೆ ಮೂಡಿತ್ತು.

ಹೋರಿ ಮತ್ತು ಧನಿಯಾಳ ನಡುವೆ ಜಗಳವಾದ ನಂತರ ಅವರು ತಮ್ಮ ತಮ್ಮ ತಪ್ಪುಗಳನ್ನು ತಿದ್ದಿಕೊಂಡು ಮನಸ್ಸಿನಲ್ಲಿಯೇ ಕೊರಗುತ್ತಿದ್ದರು. ಎಷ್ಟೋ ದಿನಗಳು ಅವರು ಪರಸ್ಪರ ಮಾತನಾಡದೆ ಇರುತ್ತಿದ್ದರು. ಈಗ ಅವರು ಸಂಪೂರ್ಣವಾಗಿ ಸಿಟ್ಟನ್ನು ಬಿಟ್ಟಿದ್ದಾರೆ. 'ಗಂಡ ಎಷ್ಟೇ ಕೆಟ್ಟವನಾದರೂ ಅವನು ನನ್ನ ಗಂಡ ಹಾಗೂ ಒಳ್ಳೆಯವನು. ಕೋಪ ಬಂದಾಗ ಹೀಗೆ ಮಾಡುವನು. ೨೫ ವರ್ಷ ಅವನೊಂದಿಗೆ ನಾನು ಸಂಸಾರ ಮಾಡಿದ್ದೇನೆ. ಕಷ್ಟ ಸುಖ ಎರಡನ್ನೂ ನೋಡಿದ್ದೇನೆ' ಎಂದು ಅವಳು ಸರಿ ಹೋಗಲು ಸಿದ್ಧಳಾಗುವಳು.

ಇತ್ತ ಕಡೆ ಹೋರಿ ನಾನು ಎಲ್ಲರ ಮುಂದೆ ಅವಳನ್ನು ಹೊಡೆಯ ಬಾರದಾಗಿತ್ತು. ೨೫ ವರ್ಷ ಸಂಸಾರ ಮಾಡಿದವಳನ್ನು ಇಡೀ ಹಳ್ಳಿಯ ಮುಂದೆ ಹೊಡೆದದ್ದು ನನ್ನ ನೀಚತನವೇ ಆಗಿತ್ತು ಎಂದು ಪ್ರಾಯಶ್ಚಿತ್ತ ಪಡುತ್ತಿದ್ದ.

ಇವರಿಬ್ಬರ ನಡುವಿನ ಮಾತುಕತೆ ಹಸಿದವನ ಹೊಟ್ಟೆಗೆ ಪರಮಾನ್ನವಾಗಿತ್ತು. ಇಬ್ಬರೂ ಮನಬಿಚ್ಚಿ ಮಾತನಾಡಿದಕ್ಕೆ ಇಬ್ಬರೂ ಪ್ರೀತಿಯ ಮಾತುಗಳನ್ನು ಆಡಿದರೂ ಮತ್ತೆ ಇಬ್ಬರೂ ಸಂಸಾರದ ತೇರನ್ನು ಎಳೆಯಲು ಸರಿಯಾಗಿ ಹೊಂದಿಕೊಂಡರು.

ಗೋಬರ ಹಾಗೂ ಜುನಿಯಾಳ ಮದುವೆ ಪ್ರಸಂಗದಲ್ಲಿ ಪಂಚರು ಹಾಕುವ ದಂಡದಿಂದ ಹೋರಿರಾಮ ಹಾಗೂ ಧನಿಯಾಳ ಮಧುರವಾದ ಮಾತು ನಡೆಯುವುದು. ಧನಿಯಾ ಪಂಚರ ವಿರುದ್ಧ ಸಿಡಿದೇಳುವಳು. ಮತ್ತು ಜುನಿಯಾಳನ್ನು ಮಾನವೀಯತೆಯಿಂದ ಮನೆಯಲ್ಲಿಟ್ಟುಕೊಂಡಿದ್ದಕ್ಕೆ ದಂಡ ಏಕೆ ಹಾಕಬೇಕು ಎಂದು ಧನಿಯಾ ವಿರೋಧಿಸುವಳು.

ಧನಿಯಾ ಮತ್ತು ಹೋರಿ ಬೇರೆ ಬೇರೆ ಮಾತನಾಡಿದರೂ ಅಲ್ಲಿ ಇಬ್ಬರ ನಿರ್ಧಾರ ಹಾಗೂ ಗಂಡನಿಗೆ ಒಳ್ಳೆಯದಾಗಬೇಕು ಎಂಬುದು ಧನಿಯಾಳ ಅಪೇಕ್ಷೆಯಾಗಿತ್ತು. ಸಾಲ ಹೆಚ್ಚಾದರೆ ಮನೆಯವರನ್ನು ಸಾಕುವ ಹೊರೆ ಹೋರಿಯ ತಲೆಯ ಮೇಲೆ ಬೀಳುತ್ತದೆ ಎಂದು ಎಚ್ಚರ ವಹಿಸುವಳು.

ಮೊದಲು ನಡೆದ ಜಗಳದಿಂದ ಇಬ್ಬರೂ ಮತ್ತೆ ಮಾತನಾಡತೊಡಗಿದರು. ನಂತರವೂ ವಾದವಿವಾದಗಳೂ ಆದವೇ ಹೊರೆತು ಮತ್ತೇನು ದೊಡ್ಡ ಗಲಾಟೆಯಾಗಲಿಲ್ಲ. ಮತ್ತೆ ಗಂಡ ಹೆಂಡತಿಯರ ನಡುವೆ ಪ್ರೀತಿಯ ಮಾತುಕತೆ ಪ್ರಾರಂಭವಾಯಿತು.

ಹೋರಿರಾಮನು ತನ್ನ ಮಗನ ಮದುವೆಯ ಸಲುವಾಗಿ ವಿಧಿಸಿದ ದಂಡದಲ್ಲಿ ಹೊಲ ಹಾಗೂ ಧಾನ್ಯಗಳನ್ನು, ಮನೆಯನ್ನು ಕಿತ್ತುಕೊಂಡರೂ ಧನಿಯಾ ದೃತಿಗೆಡದೆ ಕೂಲಿ ಮಾಡಲು ಸಿದ್ಧವಾದಳು. ದಂಡ ಕೊಡಲು ಧನಿಯಾ ನಿರಾಕರಿಸಿದರೂ

ಹೋರಿರಾಮ 'ಪಂಚರಲ್ಲಿ ಪರಮೇಶ್ವರ ನೆಲೆಸಿರುತ್ತಾನೆ' ಎಂದು ಊರಿನ ಪ್ರಮುಖನಿಗೆ ಗೌರವ ನೀಡಿ ಎಲ್ಲವನ್ನು ದಂಡಕ್ಕೆ ತೆತ್ತರೂ ಇಬ್ಬರೂ ಧೃತಿಗೆಡದೆ ಕೂಲಿ ಮಾಡಲು ಮುಂದಾದರೂ ಕೊನೆಗೆ ದಾತಾದೀನನ ಕೈಕೆಳಗೆ ಹೋರಿರಾಮನು ಕೂಲಿ ಮಾಡಲು ಹೋದಾಗ, ಧನಿಯಾಳು ಅವನಿಗೆ ಸಾತ್ ನೀಡಿದಳು ಹಾಗೂ ಅವನ ಕೆಲಸದಲ್ಲಿ ಬೆಂಬಲಕ್ಕೆ ನಿಂತಳು.

ದಾತಾದೀನನ ಕೂಲಿಯಾಗಿ ಕೆಲಸ ಮಾಡುವಾಗ ತನ್ನ ಗಂಡನ ಆತ್ಮಗೌರವಕ್ಕೆ ಧಕ್ಕೆ ಬರುವಂತೆ ಮಾತನಾಡಿದರು. ಅವಳು ಆ ಹಿರಿಯ ಬ್ರಾಹ್ಮಣ ಪಂಡಿತರನ್ನು ವಿರೋಧಿಸಿದಳು. ದಾತಾದೀನ ಹೋರಿರಾಮನ ಆತ್ಮಗೌರವಕ್ಕೆ ಧಕ್ಕೆ ಬರುವಂತೆ ಮಾತನಾಡಿದಾಗ ಹೋರಿಗೆ ಕೋಪ ಬಂದು ಕೆಲಸದಲ್ಲಿ ಮುಂದಾಗಲು ಅವನು ಮೊದಲೇ ಹಸಿವಿನಿಂದ ಬಳಲುತ್ತಿದ್ದ ಹಾಗೂ ಅವನು ಹಲವು ತಿಂಗಳಿಂದ ಸರಿಯಾಗಿ ಹೊಟ್ಟೆಗೆ ಸಿಗದ ಕಾರಣ ಅವನ ಕಣ್ಣಿಗೆ ಮಂಜು ಕವಿದಂತಾಗಿ ಬೀಳುವನು. ಆಗ ಧನಿಯಾ ಗಂಡನಿಗೆ ಏನು ಆಯಿತು ಎಂದು ಗಾಬರಿಗೊಂಡು ತಾನು ಹೊತ್ತುಕೊಂಡು ಬಂದಿದ್ದ ಕಬ್ಬಿನ ಹೊರೆಯನ್ನು ಎಸೆದು ಹೋರಿಯ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಅಳಲಾರಂಭಿಸಿದಳು. 'ನೀವು ನನ್ನನ್ನು ಬಿಟ್ಟು ಎಲ್ಲಿಗೆ ಹೋಗುತ್ತೀರಿ? ಲೇ ಸೋನಾ ಓಡಿಹೋಗಿ ನೀರು ತೆಗೆದು ಕೊಂಡು ಬಾ' ಎಂದು ದುಃಖ ತಪ್ತಳಾಗಿ ಅಳುತ್ತ ಹೇಳಿದಳು. ಧನಿಯಾ ಗಂಡನ ಮೇಲೆ ತುಂಬನೇ ಪ್ರೀತಿಯನ್ನು ಹೊಂದಿದ್ದಳು. ತುಂಬನೆ ಗೌರವವನ್ನು ಅಕ್ಕರೆಯನ್ನು ಹೊಂದಿದ್ದವಳು. ಹೋರಿಯು ಯಾವಾಗ ನೆಮ್ಮದಿಯಿಂದ ಇರುವರು ಎಂದು ಕಳವಳವನ್ನು ಪಡುತ್ತಿದ್ದಳು.

ಹೋರಿಯು ಸಹ ತನ್ನ ಹೆಂಡತಿಯ ಸ್ವಭಾವವನ್ನು ತಿಳಿದವನಾಗಿದ್ದ. ಅವಳು ಆತನ ಮೇಲೆ ಇಟ್ಟ ಗೌರವ ಪ್ರೀತಿಗಳ ಬಗ್ಗೆ ತಿಳಿದಿದ್ದ. ಹೋರಿರಾಮ ಕಣ್ಣು ಬಿಟ್ಟು ಅತ್ತ ಇತ್ತ ಹಾರಿಕೆಯ ನೋಟ ಬೀರಿದ. ಧನಿಯಾಳಿಗೆ ಜೀವ ಬಂದಹಾಗೆ ಆಯಿತು. ಅವಳಿಗೆ ತನ್ನನ್ನು ತಡೆದುಕೊಳ್ಳಲಾಗಲಿಲ್ಲ. ಹೋರಿಯನ್ನು ತಬ್ಬಿಕೊಂಡು ಹೇಳಿದಳು. ಈಗ ಹೇಗಿದೆ ನಿಮ್ಮ ಆರೋಗ್ಯ. ನನ್ನ ಪ್ರಾಣವೇ ಹೊರಟು ಹೋಗಿತ್ತು ಎಂದು ಅಳುವಳು. ಹೋರಿಯೂ ಸಹ ಆಕೆಯನ್ನು ಪ್ರೀತಿಯಿಂದ ನೋಡುವನು.

ಹೀಗೆ ಇಬ್ಬರೂ ಪರಸ್ಪರ ಪ್ರೀತಿಯಿಂದ ಹಾಗೂ ಅಭಿಮಾನ ಗೌರವಗಳಿಂದ ತಮ್ಮ ಸಂಬಂಧವನ್ನು ಹೆಣೆದುಕೊಂಡಿದ್ದರು. ಅದೇ ರೀತಿ ಕೊನೆಯವರೆಗೂ ಗಂಡನನ್ನು ಅಷ್ಟೆ ಅಕ್ಕರೆಯಿಂದ ಕಾಣುವಳು. ಹೋರಿರಾಮನು ಸಹ ತನ್ನ ಹೆಂಡತಿಯನ್ನು ಅಷ್ಟೇ ಗೌರವ ಪ್ರೀತಿಯಿಂದ ಕಾಣುತ್ತಿದ್ದನು. ಸಾಯುವಾಗಲೂ ತನ್ನ ಹೆಂಡತಿಯ ಮುಂದೆ ಕ್ಷಮೆ ಯಾಚಿಸುವನು.

ಹೀಗೆ ಗೋದಾನ ಕಾದಂಬರಿಯಲ್ಲಿ ಹೆಣ್ಣು ಗಂಡಿನ ಸಂಬಂಧಗಳ ಚಿತ್ರಣವನ್ನು ಕಂಡಾಗ ಮೊದಲು ಹೋರಿರಾಮ ಹಾಗೂ ಧನಿಯಾ ಇಬ್ಬರು ಪ್ರಮುಖ ಪಾತ್ರದಲ್ಲಿ ಕಂಡುಬರುತ್ತಾರೆ. ಹಾಗೂ ಇಬ್ಬರೂ ಅತ್ಯಂತ ಪ್ರೀತಿ ಗೌರವಗಳೊಂದಿಗೆ

ಜೀವನದಲ್ಲಿ ಹೊಂದಿಕೊಂಡು ಒಬ್ಬರಿಗೊಬ್ಬರು ಪೂರಕವಾಗಿ ಬೆಂಬಲ ನೀಡಿರುವುದು ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ.

ಭೋಲ ಒಬ್ಬ ದನಗಳ ವ್ಯಾಪಾರಿ. ಈತನು ವ್ಯಾಪಾರ ಮಾಡುತ್ತಾ ಜೀವನ ಸಾಗಿಸುತ್ತಿದ್ದ. ಗಂಡ ಹೆಂಡಿರ ಸಂಬಂಧ ತುಂಬ ವಿಚಿತ್ರವಾಗಿ ನಿರೂಪಿತವಾಗಿದೆ. ಹೆಂಡತಿ ಗೈಯ್ಯಾಳಿ ಹಾಗೂ ಜಿಪುಣಿ. ಭೋಲನ ಮೊದಲ ಹೆಂಡತಿ ಈ ರೀತಿಯ ಗುಣಗಳನ್ನು ಹೊಂದಿದ್ದು, ಅವನನ್ನು ತುಂಬ ಬೈಯ್ಯುವಳು. ಹಾಗೂ ಸರಿಯಾಗಿ ಅವಳು ಅವನನ್ನು ನೋಡಿಕೊಳ್ಳುತ್ತಿರಲಿಲ್ಲ. ತುಂಬ ತೊಂದರೆ ನೀಡುತ್ತಿದ್ದಳು. ಕೊನೆಗೆ ಮೊದಲ ಹೆಂಡತಿ ಸತ್ತುಹೋದಳು. ಮತ್ತೆ ಈತನಿಗೆ ಮಕ್ಕಳು ಮರಿ ಎಲ್ಲರೂ ಇದ್ದರೂ ತನ್ನ ಸುಖಕ್ಕಾಗಿ ಎರಡನೆಯ ಮದುವೆಯಾದನು. ಅವಳ ಹೆಸರು ನೋಹರಿ. ಇವಳನ್ನು ಮದುವೆಯಾದ ಮೇಲೆ ಭೋಲನ ಮಕ್ಕಳು ಭೋಲನನ್ನು ಮನೆಯಿಂದ ಹೊರಗೆ ಹಾಕುವರು. ನಂತರ ಭೋಲ ಹಾಗೂ ನೋಹರಿ (ವಿಧವೆ) ಇಬ್ಬರೂ ನೋಖೇರಾಮನಲ್ಲಿಗೆ ಮಕ್ಕಳಿಗೆ ಬುದ್ಧಿ ಹೇಳುವಂತೆ ಹೋಗುವರು. ನೋಖೇರಾಮನು ಈ ಭೋಲಾನ ಹೆಂಡತಿಯನ್ನು ದುರುಪಯೋಗ ಪಡಿಸಿಕೊಳ್ಳಬಹುದು ಎಂಬ ದುರುದ್ದೇಶದಿಂದ ದಂಪತಿಗಳಿಗೆ ಆಶ್ರಯ ನೀಡುವನು. ಅವನು ತನ್ನ ಹಸು ಕಟ್ಟುತ್ತಿದ್ದ ಜಾಗದಲ್ಲಿ ಅವರ ವಾಸಕ್ಕೆ ಒಂದು ಕೋಣೆಯನ್ನು ಕೊಟ್ಟನು. ತಮ್ಮ ದನಕರುಗಳನ್ನು ನೋಡಿಕೊಳ್ಳಲು, ಅವುಗಳಿಗೆ ಹುಲ್ಲು ಹಾಕಿ ಹಿಂಡಿ ತಿನಿಸಿಬೇಕಾಗುತ್ತದೆ. ಅದಕ್ಕೆ ತಿಂಗಳಿಗೆ ೩ ರೂಪಾಯಿ ಸಂಬಳ ಹಾಗೂ ದಿನಕ್ಕೆ ಒಂದು ಸೇರು ಹಿಟ್ಟಿನಂತೆ ಅವನನ್ನು ನೌಕರನನ್ನಾಗಿಟ್ಟುಕೊಂಡನು. ನೋಖೇರಾಮನು ಭೋಲನಿಗೆ ಹಾಗೂ ಅವನ ಹೆಂಡತಿಗೆ ಆಶ್ರಯ ನೀಡಿದ್ದ ಕಾರಣ ಭೋಲನ ಹೆಂಡತಿ ತುಂಬ ಚುರುಕಾಗಿ ರಂಗುರಂಗಿನ ಒಬ್ಬ ಯುವತಿಯಾಗಿದ್ದಳು. ಆದ್ದರಿಂದ ತನ್ನ ಆಸೆ ತೀರಿಸಿಕೊಳ್ಳಲು ನೋಖೇರಾಮ ಭೋಲನಿಗೆ ಆಶ್ರಯ ನೀಡಿದನು. ಇಲ್ಲಿ ನೋಹರಿ ಕೂಡ ಗಂಡನ ಬಗ್ಗೆ ಯಾವುದೇ ಕಾಳಜಿಯನ್ನು ತೋರದೆ ನೋಖೇರಾಮನೊಂದಿಗೆ ಅನೈತಿಕ ಸಂಬಂಧವನ್ನಿಟ್ಟುಕೊಂಡು ಗಂಡನಿಗೆ ಇಷ್ಟ ಇಲ್ಲದೆ ಹೋದರೂ ಅವಳಿಗೆ ನೋಖೆ ರಾಮನನ್ನು ಬಿಟ್ಟು ಭೋಲನ ಗುಡಿಸಲಿನಲ್ಲಿ ಜೀವಿಸಲು ಮನಸ್ಸಿರಲಿಲ್ಲ. ಇವಳು ಸಹ ಭೋಲನನ್ನು ಹೊಡೆದು ಬಡಿದು ಮಾಡುತ್ತಿದ್ದಳು.

ಭೋಲಾನಿಗೆ ಇಬ್ಬರು ಹೆಂಡತಿಯರೂ ಇದ್ದರೂ ಇಬ್ಬರಿಂದಲೂ ಭೋಲಾನು ಬಯಸುವ ಪ್ರೀತಿ ಸಿಗಲಿಲ್ಲ. ಅವನ ಕೈಯಲ್ಲಿ ಏನೂ ಆಗುತ್ತಿರಲಿಲ್ಲ. ಅಸಹಾಯಕನಾಗಿ ಜೀವನ ಸಾಗಿಸುತ್ತಿದ್ದ. ನೋಹಾರಿ ವಿಲಾಸಿ ಜೀವನಕ್ಕೆ ಹೊಂದಿಕೊಂಡಳು. ಹಾಗೂ ಗಂಡನು ಅವಳಿಗೆ ಊಟದಲ್ಲಿ ಉಪ್ಪಿನ ಕಾಯಿಯಂತೆ ಮಾತ್ರ ಇದ್ದ. ಹೀಗೆ ಈ ಸಂಬಂಧವೂ ಕೂಡ ಸ್ವಾರ್ಥ ಹಾಗೂ ಮೋಹದ ನೆಲೆಯಲ್ಲಿ ಚಿತ್ರಣವಾಗಿದೆ. ಇಲ್ಲಿ ನಿಜವಾದ ಪ್ರೀತಿ ಬಯಸುವ ವ್ಯಕ್ತಿಗಳಿಗೆ ಕೊನೆಗೂ ದೊರೆಯುವುದು ಕಷ್ಟ. ಆದರೆ ಈ ರೀತಿಯ ಸಂಬಂಧಗಳನ್ನು ಕಾಣುತ್ತೇವೆ ಎಂದು ಕಾದಂಬರಿಯಲ್ಲಿ ವಿಡಂಬಿಸಲಾಗಿದೆ.

ಕೌಟುಂಬಿಕ ನೆಲೆಯ ಸಂಬಂಧಗಳಲ್ಲಿ ಇದೂ ಒಂದು. ದಂಪತಿಗಳ ಸಂಬಂಧ ಇದ್ದು ಪ್ರೇಮ ವಿವಾಹವಾದರೂ ಕೊನೆಗೆ ಗಂಡ ಹೆಂಡಿರ ಒಂದು ಉತ್ತಮ ಜೀವನದ ದಾರಿ ತುಳಿಯುವ ಪಾತ್ರಗಳಾಗಿವೆ. ಗೋಬರ ಹೋರಿರಾಮನ ಮಗನಾಗಿದ್ದು, ಜುನಿಯಾಳು ಭೋಲನ ಮಗಳು ಗಂಡ ಸತ್ತಮೇಲೆ ತಂದೆಯ ಮನೆ ಚಾಕರಿ ಮಾಡುತ್ತಾ ನಗರದ ಮನೆ ಮನೆಗೆ ಹಾಲು ಹಾಕುತ್ತ ಜೀವನ ಸಾಗಿಸುತ್ತಿದ್ದಳು.

ಭೋಲನಿಂದ ಹೋರಿರಾಮ ಹಸು ತೆಗೆದುಕೊಂಡಿದ್ದರಿಂದ ಇವರ ಪರಿಚಯವಾಯಿತು. ಗೋಬರ ಜುನಿಯಾಳನ್ನು ಆವಾಗವಾಗ ಭೇಟಿ ಮಾಡುತ್ತಾ ಮಾತಾಡಿಸುತ್ತಿದ್ದ. ಕೊನೆಗೆ ಅವಳನ್ನು ತನ್ನ ಮನೆಗೆ ತಂದು ಬಿಟ್ಟು ಪರಾರಿಯಾಗುವನು. ಹೋರಿರಾಮನ ಮನೆಯಲ್ಲಿ ಜುನಿಯಾಳ ಜೀವನ ಸಾಗಿದರೂ ಕೊನೆಯಲ್ಲಿ ಗೋಬರ ನಗರದಿಂದ ಮನೆಗೆ ಬಂದು ಹೆಂಡತಿ ಮಗುವನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗುವನು.

ನಗರದಲ್ಲಿ ಜೀವನ ಸಾಗಿಸಲು ಗೋಬರನಿಗೆ ಮೊದಲಿನ ತರಹ ದುಡಿಮೆ ಇರಲಿಲ್ಲ. ಅಲ್ಲದೇ ಮನಸ್ಸು ಜುನಿಯಾಳ ಕಡೆಗೆ ಹರಿಯುತ್ತಿರಲಿಲ್ಲ. ಇಬ್ಬರೂ ಮೊದಲು ಅನೋನ್ಯತೆಯಿಂದ ಇದ್ದರೂ, ಬರುಬರುತ್ತಾ ಜುನಿಯಾಳಿಗೆ ಗೋಬರನ ಬಗ್ಗೆ ಆಸಕ್ತಿ ಕಡಿಮೆಯಾಗಿ ಬೇಸರ ಮೂಡಿತು. ಇಬ್ಬರೂ ಮೊದಲು ಪ್ರೀತಿಯಿಂದ ಇದ್ದರೂ ಅವನ ಲೈಂಗಿಕ ವರ್ತನೆಗಳು ಪದೇ ಪದೇ ಅವಳಲ್ಲಿ ಬೇಸರವನ್ನು ಉಂಟುಮಾಡಿ ಇಬ್ಬರ ನಡುವೆ ಜಗಳಗಳೇ ಹೆಚ್ಚಾದವು. ಇದು ಕೊನೆಗೆ ತನ್ನ ಮಗುವಿನ ಸಾವಿಗೂ ಕಾರಣವಾಯಿತು. ಜುನಿಯಾ ಎರಡನೆ ಮಗುವಿಗೆ ಜನ್ಮ ಕೊಟ್ಟರೂ ಇಬ್ಬರಲ್ಲಿ ಯಾವುದೇ ರೀತಿಯ ಮಾತುಕತೆ ಮಾತ್ರ ಇರಲಿಲ್ಲ. ಅವನು ತನ್ನ ಮಗುವನ್ನು ನೋಡುತ್ತಿರಲಿಲ್ಲ. ದಿನಾಲೂ ಕುಡಿದು ಬಂದು ಬೈಗುಳದ ಮಳೆಗೈಯ್ದು ಮಲಗುತ್ತಿದ್ದ.

ಗಂಡ ಹೆಂಡಿರಲ್ಲಿ ಪ್ರೀತಿ ಇರಬೇಕೇ ವಿನಹ ಅತಿಯಾದ ಆಸೆ ಮಾತ್ರ ಇರಬಾರದು. ಪ್ರೀತಿಯನ್ನು ಮಾಡಿ ಮದುವೆಯಾದರೂ ಕೊನೆಗೆ ಇಬ್ಬರೂ ಬಹಳ ಕಷ್ಟವನ್ನು ಎದುರಿಸುತ್ತಾರೆ. ತಮ್ಮ ಬಡತನದಲ್ಲೂ ಎರಡನೆ ಮಗುವಿಗೆ ಹಾಲು ಕೊಡಲು ಅವಳಿಂದ ಆಗುವುದಿಲ್ಲ. ಅಂದರೆ ಆಕೆಯ ಎದೆಯಲ್ಲಿ ಹಾಲು ಇರಲಿಲ್ಲ. ಮಗು ತುಂಬಾ ಅಳುತ್ತಿದ್ದರೂ, ಗೋಬರ ಯಾವುದನ್ನು ತಲೆಕೆಡಿಸಿಕೊಳ್ಳದೆ ಅವನಿಗೆ ಕುಡಿತದ ಗೀಳು ಹಿಡಿದಿತ್ತು.

ಗೋಬರ ಮತ್ತು ಜುನಿಯಾಳ ನಡುವೆ ತುಂಬಾನೇ ಘರ್ಷಣೆ ಪ್ರಾರಂಭವಾಗಿತ್ತು. 'ಮಗ ಸತ್ತು ಏಳು ದಿನಕ್ಕೇ ಮತ್ತೆ ಅವಳನ್ನು ಬಲವಂತ ಮಾಡತೊಡಗಿದಾಗ ಅವಳು ಕೋಪದಲ್ಲಿ ಉರಿಯುತ್ತಾ ಹೇಳಿದಳು. ನೀವು ಎಂತಹ ಪಶು!' ಈ ಕಷ್ಟಗಳಿಂದ, ನೋವುಗಳಿಂದ ಜುನಿಯಾ ಬದುಕಿದ್ದೂ ಒಂದು ನಿರ್ಜೀವ ಯಂತ್ರವಾಗಿದ್ದಳು. ಗೋಬರ ಅವಳನ್ನು ಸಂತೈಸಿ ಪ್ರೀತಿಯ ಮಾತು ಆಡದೆ ತನ್ನದೇ ಲೋಕದಲ್ಲಿ ಸಂಚರಿಸುತ್ತಿದ್ದ. ಅವಳ ಶೋಕದಲ್ಲಿ ಭಾಗಿಯಾಗಿ ಅವಳ

ಅಂತರ್ಜೀವನದಲ್ಲಿ ಪ್ರವೇಶಿಸಿ ಗೋಬರ ಅವಳ ಸಮೀಪ ಹೋಗಬಹುದಿತ್ತು. ಅವಳ ಬದುಕಿನ ಅಂಗವಾಗಬಹುದಿತ್ತು. ಆದರೆ ಅವನು ಅವಳ ಬಾಹ್ಯ ಜೀವನದ ಒಣಗಿದ ದಡದ ಹತ್ತಿರ ಮಾತ್ರ ಬಂದು ಬಾಯಾರಿಕೆಯ ಶಮನವಾಗದೆಯೇ ಹಿಂದಕ್ಕೆ ಸರಿಯುತ್ತಿದ್ದ[3].

ಮಗು ಸತ್ತಿದ್ದು ಅವನಿಗೆ ಅಷ್ಟೇನೂ ದುಃಖವಾಗಲಿಲ್ಲ. ಅವಳು ಲಲ್ಲೂವಿನ ನೆನಪಿನಲ್ಲಿ ಅಳುವುದೂ ಅವನಿಗೆ ಹಿಡಿಸುತ್ತಿರಲಿಲ್ಲ. ಇಲ್ಲಿ ತಾಯಿ ಹೆತ್ತು ಹೊತ್ತು ಪ್ರೀತಿ ಹಂಚಿರುತ್ತಾಳೆ. ಅದಕ್ಕೆ ಅವಳಿಗೆ ಕರುಳು ಬಳ್ಳಿಯ ಸಂಕಟ ಹೆಚ್ಚಿರುತ್ತದೆ. ಆದರೆ ತಂದೆಯ ಮನಸ್ಸು ಅಂದರೆ ಗಂಡಸು ಹೆಣ್ಣಿನ ಅವಶ್ಯಕತೆಯ ಒಂದು ವಸ್ತುವಂತೆ ಕಾಣುತ್ತಾರೆಯೇ ವಿನಹ ಅವಳ ದುಃಖದಲ್ಲಿ ನೋವನ್ನು ಹಂಚಿಕೊಳ್ಳುವುದಿಲ್ಲ. ಹೀಗೆ ಜುನಿಯಾಗೂ ಈ ಮಧ್ಯ ಅವಳ ಹೆಂಡತಿಯ ಸ್ಥಾನ ಯಾವುದು ಎನ್ನುವುದು ಹಾಗೂ ತಾನು ಇಟ್ಟುಕೊಂಡುವಳು ಎನ್ನುವ ಸಂದೇಹ ಉಂಟಾಗುವಂತೆ ಗೋಬರನ ವರ್ತನೆಗಳು ಇದ್ದವು. ಅವಳು ನೊಂದುಕೊಂಡು ಸುಮ್ಮನೆ ಇರುವಂತೆ ಅವಳಿಗೆ ಅನಿಸುತಿತ್ತು.

ಜುನಿಯಾಳ ಎದೆಯಲ್ಲಿ ಹಾಲು ಇಲ್ಲದ ಕಾರಣದಿಂದ, ಅವಳ ಪಕ್ಕದ ಮನೆಯವಳಾದ ಚುಹಿಯಾಳು, ಜುನಿಯಾಳ ಮಗುವಿಗೆ ಹಾಲು ಕುಡಿಸುತ್ತಿದ್ದಳು. ಹಾಗೂ ಜುನಿಯಾಳಿಗೂ ಸಹಾಯ ಮಾಡುತ್ತಿದ್ದಳು. ಗೋಬರನು ಅದೆಷ್ಟು ಬಾರಿ ಕುಡಿದು ಬಂದು ಹೊಡೆಯುವ ಸಂದರ್ಭದಲ್ಲಿ ಜುನಿಯಾಳ ಬೆಂಬಲಿಗಳಾಗಿ ನಿಲ್ಲುತ್ತಿದ್ದಳು. ಚುಹಿಯಾಳು ತನ್ನ ಮನೆಗೆ ಆಗಾಗ ಬರುವುದು ಗೋಬರನಿಗೆ ಇಷ್ಟ ಇರದಿದ್ದರೂ ಮಗ ಹಾಗೂ ಜುನಿಯಾಳ ಸಲುವಾಗಿ ಸಹಿಸಿಕೊಂಡಿದ್ದ.

ನೆರೆಹೊರೆಯವರು ಕಷ್ಟದಲ್ಲಿ ಸಹಾಯ ಮಾಡುವುದು ಸಹಜವಾದುದು. ಹಾಗೂ ಬಡವರಲ್ಲಿ ಒಬ್ಬರಿಗೊಬ್ಬರು ಸಹಾಯ ಸಹಾನುಭೂತಿಯನ್ನು ಹೆಚ್ಚಾಗಿ ಕಾಣುತ್ತೇವೆ.

ಗೋಬರ ಕೆಲಸ ಮಾಡುತ್ತಿದ್ದ ಕಾರ್ಖಾನೆಯಲ್ಲಿ ಪ್ರತಿನಿತ್ಯ ಒಂದಲ್ಲಾ ಒಂದು ಹಂಗಾಮ ನಡೆಯುತ್ತಲೇ ಇತ್ತು. ಗೋಬರನಿಗೆ ಮನೆಗೆ ಬಂದರೂ ನೆಮ್ಮದಿಯ ಸಂತೋಷದ ವಾತಾವರಣವಿರಲಿಲ್ಲ. ಮತ್ತೆ ಕಾರ್ಖಾನೆಗೆ ಹೋದರೂ ಅಲ್ಲಿ ಜಗಳ, ಮುಷ್ಕರ, ಗೊಂದಲಗಳು. ಕೊನೆಗೆ ಬೇರೆ ಕೂಲಿಗಳಿಂದ ಜಗಳ ಪ್ರಾರಂಭವಾಗಿ ಗೋಬರ ತುಂಬ ಪೆಟ್ಟು ತಿಂದಿದ್ದ. 'ಜುನಿಯಾ ಇದರ ವಿಷಯವಾಗಿ ಅವನಿಗೆ ಬುದ್ಧಿ ಹೇಳಿದ್ದಳು. ಆದರೂ ಅವನು ಕೊನೆಗೆ ಗಾಯಗೊಂಡು ಮನೆಗೆ ಬಂದ. ಆಗ ಮನೆಯಲ್ಲಿ ಒಂದು ಬಿಡಿಗಾಸೂ ಇರಲಿಲ್ಲ. ಗೋಬರನನ್ನು ಕಂಡು ಅವಳಿಗೆ ಪಾಪ ಎನಿಸಿ ಅವನ ಸೇವೆ ಮಾಡಲು ಮುಂದಾದಳು. ಇವಳು ಕೂಲಿನಾಲಿ ಮಾಡಿಕೊಂಡು ಗಂಡನನ್ನು ಸಾಕಲು ಮುಂದಾದಳು. ಇಬ್ಬರಲ್ಲಿ ಆಗ ಹೊಂದಾಣಿಕೆಯ ಗೆರೆ

ಮೂಡುತ್ತದೆ. ಗೋಬರನಿಗೆ ತನ್ನ ತಪ್ಪಿನ ಅರಿವು ಆಗಿದೆ. ಜುನಿಯಾಳು ಸಹ ತನ್ನ ದ್ವೇಷವನ್ನು ಬಿಟ್ಟು ಹುಲ್ಲು ಕೊಯ್ದು ಗಂಡನ ಉಪಚಾರವನ್ನು ಕೈಗೊಂಡಿದ್ದಳು.

ಗಂಡ ಹೆಂಡಿರು ಎನ್ನುವ ಸಂಬಂಧ ಎಷ್ಟೇ ಜಗಳ ಆದರೂ ಕೊನೆಗೆ ಒಬ್ಬರಿಗೊಬ್ಬರು ಸಾಯುವವರೆಗೆ ಪ್ರೀತಿಯಿಂದ ಜೀವನ ಸಾಗಿಸುವುದೇ ಆಗಿದೆ. ಕತ್ತಲಾದ ಮೇಲೆ ಬೆಳಕು ಬರಲೇಬೇಕು ಎನ್ನುವ ಹಾಗೆ ಎಷ್ಟೆ ಕಿತ್ತಾಡಿದರೂ ಒಂದಲ್ಲಾ ಒಂದ ಸಲ ಇಬ್ಬರಲ್ಲಿ ಯಾರಿಗಾದರೂ ಏನಾದರೂ ಆದರೆ ಕೊನೆಗೆ ಸಂಬಂಧ ಸೆಳೆತ ಬಂದು ಕೊನೆಗೆ ಇಬ್ಬರೂ ಮತ್ತೆ ಪ್ರೀತಿಯಿಂದ ಬಾಳಲು ಪ್ರಾರಂಭ ಮಾಡುವರು.

ಗೋಬರನ ಆರೋಗ್ಯ ಸರಿಹೋಗಲು ಡಾ. ಮಾಲತಿಯ ಮನೆಯಲ್ಲಿ ಕೆಲಸ ಮಾಡಲು ಸೇರಿಕೊಳ್ಳುವನು. ನಂತರ ಜುನಿಯಾ, ಗೋಬರ ತನ್ನ ಮಗು ಮಾಲತಿಯ ಬಂಗಲೆಯ ಒಂದು ಕೊಠಡಿಯಲ್ಲಿ ವಾಸಮಾಡುತ್ತಾರೆ. ಈಗ ಜುನಿಯಾಳಿಗೆ ಗೋಬರನ ಬಗ್ಗೆ ಒಳ್ಳೆಯ ಅಭಿಪ್ರಾಯ ಮೂಡಿತು. ಹಾಗೆ ಇಬ್ಬರೂ ಕೆಲಸ ಮಾಡಲು ಮುಂದಾಗಿ, ಪ್ರೀತಿಯಿಂದ ಜೀವನ ಸಾಗಿಸುತ್ತಿದ್ದರು.

ಗೋಬರ ಜುನಿಯಾಳ ಈ ವೈಮನಸ್ಸಿಗೆ ಜಗಳಕ್ಕೆ ಕಾರಣ ಗೋಬರ ಅತಿರೇಕ ವರ್ತನೆ ಹಾಗೂ ದುಡಿಮೆ ಇಲ್ಲದೆ ಮನೆಯಲ್ಲಿ ಕುಳಿತುಕೊಳ್ಳುವ ಸ್ವಭಾವವಾಗಿತ್ತು. ಅಲ್ಲದೆ ಜುನಿಯಾ ನಗರಕ್ಕೆ ಬಂದ ಮೇಲೆ ಒಬ್ಬಳೇ ಎನ್ನುವ ಭಾವನೆ ಬಂದದ್ದು. ಹಾಗೆ ಜುನಿಯಾಳನ್ನು ಪ್ರೀತಿಯಿಂದ ನೋಡದೆ ತನ್ನದೇ ಆದ ವಿಚಾರದಲ್ಲಿ ಮುಳಗಿದ್ದ ಗಂಡನ ಈ ನಡವಳಿಕೆ ಅವಳ ಮನಸ್ಸಿನ ಮೇಲೆ ಸವಾರಿ ಮಾಡಿದವು. ಅವಳನ್ನು ತುಂಬ ನೋವಿಗೆ ಹಾಗೂ ಮಾನಸಿಕ ಯಾತನೆಗೆ ಗುರಿ ಮಾಡಿದವು. ಕೊನೆಗೆ ಒಂದು ರಾದ್ಧಾಂತವೇ ಆಗಿ ನಂತರ ಇಬ್ಬರೂ ಸರಿ ಹೋಗುವ ಮತ್ತು ಉತ್ತಮ ಜೀವನ ನಡೆಸುವ ಸನ್ನಿವೇಶವು ಚಿತ್ರಿತವಾಗಿದೆ.

ಪ್ರೀತಿಯಿಂದ ಪ್ರಾರಂಭವಾದ ಇವರ ಸಂಬಂಧ ಮಧ್ಯದಲ್ಲಿ ಒಂದು ದೊಡ್ಡ ಅವಾಂತರವೇ ಸೃಷ್ಟಿಯಾಗಿ ನಂತರ ಉತ್ತಮ ಸ್ಥಿತಿಯಲ್ಲಿ ನಿಂತು ಕೊನೆಗೆ ಮತ್ತೆ ತೊಂದರೆಗೆ ಸಮಸ್ಯೆಗಳಿಗೆ ಸಿಲುಕಿಕೊಂಡು ಮಾನಸಿಕ ನೋವುಂಡು ನಂತರ ಮತ್ತೆ ನೆಮ್ಮದಿಯ ಬದುಕನ್ನು ಸಾಗಿಸುವುದು ಕಾದಂಬರಿಯಲ್ಲಿ ನಿರೂಪಿತವಾಗಿದೆ.

ಹೋರಿರಾಮನ ತಮ್ಮ ಹೀರಾ ಹಾಗೂ ಆತನ ಹೆಂಡತಿ ಪುನ್ನಿ ಇವರು ಮೊದಲು ಹೋರಿರಾಮ ಹಾಗು ಧನಿಯಾಳ ಜೊತೆನೆ ಇದ್ದರು. ಆದರೆ ಕೌಟುಂಬಿಕ ಕಲಹಗಳಲ್ಲಿ ಹೀರಾನ ಹೆಂಡತಿ ಸಿಡಿದೆದ್ದರಿಂದ ಮನೆ ಪಾಲಾಗಿ ಬೇರೆ ಬೇರೆ ಒಲೆಗಳನ್ನು ಹಚ್ಚುವಂತೆ ಆಯಿತು.

ಹೀರಾನ ಹೆಂಡತಿ ಮನೆಯ ಯಜಮಾನಿಯಾಗಿದ್ದಳು ಹಾಗೂ ಇವಳು ಬಾಯಿಗೆ ಬಂದಹಾಗೆ ವದರಿದರೆ ಹೀರಾ ಒಮ್ಮೊಮ್ಮೆ ಅವಳಿಗೆ ಹೊಡೆಯುತ್ತಿದ್ದ. ಹೀಗೆ ಪುನ್ನಿ ಸ್ವಲ್ಪ ಬಾಯಿ ದೊಡ್ಡದು ಮಾಡಿದ್ದಕ್ಕೆ ಹೀರಾ ಮಂಚದ ಮೇಲಿಂದ ಏಳಲಾಗದಂತೆ ಅವಳಿಗೆ ಬಾರಿಸಿದ್ದ. ಏನೂ ಮಾಡಿದರೂ ಪುನ್ನಿಯ ಸ್ವಭಾವ ಮಾತ್ರ

ಬದಲಾಗುತ್ತಿರಲಿಲ್ಲ. ಮತ್ತೆ ತನ್ನ ಅಧಿಕಾರವನ್ನು ತನ್ನ ಹಠವನ್ನು ಮಾತ್ರ ಬಿಡುತ್ತಿರಲಿಲ್ಲ. ಹೀರಾನಿಗೆ ಕೋಪ ಬಂದಾಗ ಪುನ್ನಿಯನ್ನು ಬಡಿಯುತ್ತಿದ್ದ. ಮತ್ತೆ ಒಂದು ಮಾತು ಅವಳಿಗೆ ಎದುರು ಆಡುತ್ತಿರಲಿಲ್ಲ. ಹಾಗೂ ಅವಳು ಹಾಕಿದ ಗೆರೆಯನ್ನು ಎಂದೂ ದಾಟುತ್ತಿರಲಿಲ್ಲ.

ಪುನ್ನಿ ಮತ್ತು ಹೀರಾಗೆ ಎರಡು ಮಕ್ಕಳು. ಆದರೆ ಪುನ್ನಿ ವಯಸ್ಸಾದವಳಂತೆ ಕಾಣುತ್ತಿದ್ದಳು. ಇವಳಿಗೆ ಸಿಂಗಾರಕ್ಕೆ ಹಣ ಎಲ್ಲಿಂದ ಬರಬೇಕು. ಈ ಅಭಾವ ಹಾಗೂ ಅಸಹಾಯಕತೆ ಅವಳ ಪ್ರಕೃತಿಯ ಜಲವನ್ನು ಬತ್ತಿಸಿ ಕಠೋರ ಹಾಗೂ ಶುಷ್ಕವನ್ನಾಗಿಸಿತ್ತು. ಒಮ್ಮೊಮ್ಮೆ ಅವಳ ದೇಹ ಸ್ಥಿತಿಯೂ ಕೆಡುತ್ತಿತ್ತು.

ಪುನ್ನಿ ಮತ್ತು ಹೀರಾನ ನಡುವೆ ಉತ್ತಮ ಸಂಬಂಧವೇನೊ ಇತ್ತು. ಆದರೆ ಅನೇಕ ಜಗಳ, ಸಮಸ್ಯೆಗಳಿಂದ ಗಂಡ ಹೆಂಡಿರಲ್ಲಿ ಗೊಂದಲಗಳು ಹೊಡೆದಾಟಗಳು ಪ್ರಾರಂಭವಾಗಿ ಮತ್ತೆ ಮೊದಲಿನ ಸ್ಥಿತಿಗೆ ತೆರಳುತ್ತಿದ್ದವು. ಇದಕ್ಕೆ ಪ್ರಮುಖ ಕಾರಣ ಪುನ್ನಿಯ ವಿರೋಧ ಗುಣ ಹಾಗೂ ಹೆಚ್ಚು ಮಾತನಾಡುವ ಸ್ವಭಾವ. ತನ್ನ ಅಧಿಕಾರವೇ ನಡೆಯಬೇಕು. ತಾನು ಹೇಳಿದ ಹಾಗೆ ಕೇಳಬೇಕು ಎನ್ನುವ ಒಂದು ವಿಚಾರದಿಂದ ಗಂಡ ಹೆಂಡಿರ ಮಧ್ಯೆ ಜಗಳ ಪ್ರಾರಂಭವಾಗುತ್ತಿತ್ತು. ಹೀರಾನಿಗೆ ತುಂಬ ಕೋಪ ಇದ್ದುದರಿಂದ ಇದೂ ಕೂಡ ಅನಾಹುತಕ್ಕೆ ದಾರಿ ಮಾಡುತ್ತಿತ್ತು. ಹೋರಿರಾಮನ ಹಸುವಿಗೆ ವಿಷ ಇಟ್ಟು ಹಸು ಸತ್ತ ಮೇಲೆ ಹೀರಾನು ಊರು ಬಿಟ್ಟು ಓಡಿಹೋದ. ನಂತರ ಪುನ್ನಿ ಹೋರಿರಾಮನ ಸಹಾಯದಿಂದ ಹೊಲ ಗದ್ದೆಗಳನ್ನು ಬಿತ್ತನೆ ಮಾಡುವಳು. ಗಂಡ ಓಡಿಹೋದರೂ ತನ್ನದೇ ಬದುಕನ್ನು ನೀಗಿಸಿಕೊಂಡು ಬದುಕುತ್ತಿದ್ದಳು. ಅಲ್ಲದೆ ಕಷ್ಟದ ಕಾಲದಲ್ಲಿ ಧನಿಯಾಳಿಗೆ ಸಹಾಯ ಮಾಡುವಳು. ಅವಳಿಗೆ ಸಾಕಷ್ಟು ಕೋಪ ಇದ್ದರೂ ಒಳ್ಳೆಯ ಗುಣಗಳನ್ನು ಹೊಂದಿದ್ದಳು. ಗಂಡ ಹೆಂಡಿರ ನಡುವಿನ ಬಾಂಧವ್ಯ ತುಂಬಾ ಚೆನ್ನಾಗಿತ್ತು. ಆದರೆ ಕೆಲವು ಸಂದರ್ಭದಲ್ಲಿ ಇಬ್ಬರೂ ಕೋಪಗೊಂಡು ಜಗಳಕ್ಕೆ ಇಳಿಯುತ್ತಿದ್ದರು. ಮತ್ತೆ ಯಥಾ ರೀತಿ ಜೀವನ ಸಾಗುತ್ತಿತ್ತು. ಈ ರೀತಿಯ ಸಂಬಂಧಗಳು ಸಹ ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಜಗಳದಲ್ಲಿ ಕೂಡ ಪ್ರೀತಿ ಇರುತ್ತದೆ ಎಂಬುದು ಈ ಪಾತ್ರಗಳಿಂದ ನಿರೂಪಣೆಯಿಂದ ತಿಳಿದು ಬರುತ್ತದೆ. ಎಷ್ಟೆ ಜಗಳವಾಡಿದರೂ ಕೊನೆಗೆ ಈ ಸಂಬಂಧ ಮತ್ತೆ ಬೆಸೆದು ಕೊಂಡುಬಿಡುತ್ತದೆ. ಈ ರೀತಿಯಾಗಿ ಜೀವನದಲ್ಲಿ ಏನೇ ಬರಲಿ ನಂತರ ಕೂಡಿ ಬಾಳುವ ನೀತಿಯು ಈ ಪಾತ್ರಗಳ ಮೂಲಕ ಅಭಿವ್ಯಕ್ತಗೊಂಡಿದೆ.

ಖನ್ನಾನು ಒಬ್ಬ ವ್ಯಾಪಾರಿ. ಅವನು ಮಿಲ್ಲಿನ ಒಡೆಯನಾಗಿದ್ದನು. ಹಾಗೂ ರಾಯಸಾಹೇಬರ ಆಪ್ತಮಿತ್ರನು ಆಗಿದ್ದನು. ಈತನ ಹೆಂಡತಿ ಗೋವಿಂದಿ. ತಮ್ಮ ಮಕ್ಕಳೊಂದಿಗೆ ಶ್ರೀಮಂತಿಕೆಯ ಜೀವನ ಇವರದಾಗಿತ್ತು.

ಖನ್ನಾ ಹಾಗೂ ಗೋವಿಂದಿಯ ನಡುವೆ ಹೊಂದಾಣಿಕೆ ಇರಲಿಲ್ಲ. ಏಕೆ ಹೊಂದಾಣಿಕೆ ಇರಲಿಲ್ಲ ಎಂಬುದಕ್ಕೆ ತುಂಬಾನೇ ಕಾರಣಗಳನ್ನು ಕಾದಂಬರಿಯು

ನಿರೂಪಿಸಿದೆ. ಆದರೂ ಇಬ್ಬರಲ್ಲಿ ಯಾವುದೇ ಕಷ್ಟ, ಬಡತನ ಹಾಗೂ ಜ್ಯೋತಿಷ್ಯದ ರೀತ್ಯಾ ಗ್ರಹಗಳಲ್ಲಿ ಯಾವುದೇ ವಿರೋಧವಿರಲಿಲ್ಲ. ಕೆಟ್ಟ ಗ್ರಹಗಳ ಪ್ರಭಾವ ಇರಲಿಲ್ಲ. ನಕ್ಷತ್ರ ಗ್ರಹಗಳ ಹೊಂದಾಣಿಕೆಯು ಚೆನ್ನಾಗಿತ್ತು. ಇಷ್ಟೆಲ್ಲಾ ವಿಚಾರಗಳೂ ಚೆನ್ನಾಗಿದ್ದರೂ ಅವರಲ್ಲಿ ಒಬ್ಬರನ್ನು ಕಂಡರೆ ಒಬ್ಬರಿಗೆ ಆಗುತ್ತಿರಲಿಲ್ಲ.

ಖನ್ನಾರವರು ಶ್ರೀಮಂತರು, ರಸಿಕರು, ಜನರೊಂದಿಗೆ ಹೊಂದಿಕೊಳ್ಳುವ ಸ್ವಭಾವ ಅವರದು. ಬಹಳ ರೂಪಸ್ಥರೂ ಹಾಗೂ ಬಹಳ ಓದಿಕೊಂಡವರೂ ಆಗಿದ್ದರು. ನಗರದ ಗಣ್ಯರಲ್ಲಿ ಒಬ್ಬರಾಗಿದ್ದರು. ಅನೇಕ ಜನರೊಂದಿಗೆ ಸ್ನೇಹದ ಬಾಂಧವ್ಯವನ್ನು ಹೊಂದಿದ್ದವರು. ಅದೇ ರೀತಿ ಗೋವಿಂದಿ ಅಪ್ಸರೆ ಅಲ್ಲದಿದ್ದರೂ ಖಂಡಿತ ಅವಳು ಚೆಲುವೆಯರ ಗುಂಪಿಗೆ ಸೇರುತ್ತಿದ್ದಳು. ಗೋಧಿ ಮೈ ಬಣ್ಣ ಲಜ್ಜೆಯಿಂದ ತುಂಬಿದ ಕಣ್ಣುಗಳು, ಒಂದೆ ಒಂದು ಬಾರಿ ನೋಟ ಬೀರಿ ಅದು ತಾನಾಗಿಯೇ ಬಾಗಿ ಬಿಡುತ್ತಿತ್ತು. ಕೆನ್ನೆಯಲ್ಲಿ ಕೆಂಪು ಇಲ್ಲದಿದ್ದರೂ ಅಲ್ಲಿ ನುಣುಪು ಇತ್ತು. ಕೋಮಲವಾದ ಶರೀರ, ಮಾಟವಾದ ಮೈಕಟ್ಟು, ತುಂಬಿದ ತೋಳು, ಆದರೆ ಮುಖದಲ್ಲಿ ಈ ಪ್ರಪಂಚದ ವ್ಯವಹಾರ ಹಾಗೂ ವ್ಯಾಪಾರವನ್ನು ತುಚ್ಛ ಎಂದು ತಿಳಿಯುವ ಗರ್ವ ಹಾಗೂ ಒಂದು ರೀತಿಯ ಅಭಿರುಚಿ ಕಾಣುತ್ತಿತ್ತು.

ಖನ್ನಾರವರ ಹತ್ತಿರ ವಿಲಾಸದ ಸೋಗಿಗೆ ಏನೂ ಕೊರತೆ ಇರಲಿಲ್ಲ. ಶ್ರೇಷ್ಠ ಮಟ್ಟದ ಬಂಗಲೆ, ಅಪಾರವಾದ ಹಣ ಇತ್ತು. ಆದರೆ ಗೋವಿಂದಿಗೆ ಇವಕ್ಕೆಲ್ಲಾ ಯಾವುದೇ ಬೆಲೆ ಇರಲಿಲ್ಲ. ತನಗೆ ಬೇಕಾಗಿರುವುದು ಆಡಂಬರ ರಹಿತವಾದ ಪ್ರೀತಿ ಹಾಗೂ ಗಂಡನ ಉತ್ತಮವಾದ ನಡವಳಿಕೆ. ಅವಳು ದೊಡ್ಡ ಅರಮನೆಯಲ್ಲೂ ಸುಖವಾದ ಜೀವನವನ್ನು ನಡೆಸುತ್ತಿಲಲಿಲ್ಲ. ಅಷ್ಟು ಶ್ರೀಮಂತಿಕೆಯಲ್ಲೂ ಗೋವಿಂದಿ ಈ ಉಪ್ಪಿನ ಸಮುದ್ರದಲ್ಲಿ ಬಾಯಾರಿಕೆಯಲ್ಲಿ ಇದ್ದಳು. ಮಕ್ಕಳ ಲಾಲನೆ ಪಾಲನೆ, ಪೋಷಣೆ, ಹಾಗೂ ಮನೆ ವಾರ್ತೆಯೇ ಅವಳಿಗೆ ಸರ್ವಸ್ವವಾಗಿತ್ತು. ಇವಳು ಯಾವಾಗಲೂ ಇದರಲ್ಲೇ ಮುಳುಗಿರುವುದರಿಂದ ಭೋಗದ ಕಡೆ ಅವಳು ಗಮನವೇ ಹರಿಯುತ್ತಿರಲಿಲ್ಲ. ಅವಳೇನೂ ಗಂಡನ ಆಟಿಕೆಯಾಗಿರಲಿಲ್ಲ ಅಥವಾ ಅವನ ಭೋಗದ ವಸ್ತುವೂ ಆಗಿರಲಿಲ್ಲ ಎಂಬುದನ್ನು ಅವಳು ತನ್ನ ಮನಸ್ಸಿನಲ್ಲಿಯೆ ಅಂದುಕೊಂಡು ಜೀವನ ಸಾಗಿಸುತ್ತಿದ್ದಳು. ತನ್ನ ಗಂಡನಿಗೆ ತನ್ನ ನಿಜವಾದ ಚೆಲುವನ್ನು ನೋಡುವ ಕಣ್ಣು ಇಲ್ಲದಿದ್ದರೆ ಹಾಗೂ ಅವನು ಕಾಮಿನಿಗಳ ಹಿಂದೆ ಹಿಂದೆ ಸುತ್ತುತ್ತಿದ್ದರೆ ಅದು ಅವನ ದೌರ್ಭಾಗ್ಯ. ಅವಳು ದ್ವೇಷ, ಮೋಹ ಮೊದಲಾದ ಭಾವನೆಗಳನ್ನು ಜಯಿಸಿರುವಂತೆಯೆ ಅದೇ ಪ್ರೇಮ ಹಾಗೂ ನಿಷ್ಠೆಯಿಂದ ಗಂಡನ ಸೇವೆ ಮಾಡಿಕೊಂಡು ಹೋಗುತ್ತಿದ್ದಳು.

ಖನ್ನಾರವರು ಮಾಲತಿ ಎನ್ನುವ ಡಾಕ್ಟರನ್ನು ಪ್ರೀತಿಸುತ್ತಿದ್ದ. ಹಾಗು ಅವಳ ಹಿಂದೆಯೇ ಹೋಗುತ್ತಿರುವುದನ್ನು ಕಂಡಾಗ ಇವರ ಸಂಸಾರದಲ್ಲಿ ಮತ್ತಷ್ಟು ಬಿರುಕು ಕಾಣಿಸಿಕೊಂಡಿತು.

ಸಂಪತ್ತಿನ ಗೋಡೆ ಇಬ್ಬರ ನಡುವೆ ದಿನೆ ದಿನೆ ಎತ್ತರೆತ್ತರಕ್ಕೆ ಹೋಗುತ್ತಿತ್ತು. ಹಾಗೂ ದಂಪತಿಗಳನ್ನು ಇನ್ನೂ ಹೆಚ್ಚು ದೂರ ಮಾಡುತ್ತಿತ್ತು. ಖನ್ನಾ ತನ್ನ ಗಿರಾಕಿಗಳ ಹತ್ತಿರ ಹಾಗೂ ವ್ಯಾಪಾರ ಮಾಡುವ ವ್ಯಕ್ತಿಗಳ ಜೊತೆಗೆ ಮಧುರವಾಗಿ ಮಾತನಾಡುತ್ತಿದ್ದರೂ ಹಾಗೂ ನಮ್ರರಾಗಿ ವರ್ತಿಸುತ್ತಿದ್ದರು. ಆದರೆ ಮನೆಯಲ್ಲಿ ಅಷ್ಟೆ ಕಟುವಾಗಿ ವರ್ತಿಸುತ್ತಿದ್ದರು. ಹಾಗೂ ಉದ್ದಂಡರಾಗಿ ನಡೆದುಕೊಳ್ಳುತ್ತಿದ್ದರು. ಸೌಜನ್ಯ ಅವರ ಮನಸ್ಸಿನ ಸಂಸ್ಕಾರವಾಗಿರಲಿಲ್ಲ. ಅದು ಪ್ರಪಂಚಕ್ಕೆ ಮೋಸಮಾಡುವ ಒಂದು ಸಾಧನವಾಗಿತ್ತು. ಇಂತಹ ಸಂದರ್ಭದಲ್ಲಿ ಗೋವಿಂದಿ ತನ್ನ ಏಕಾಂತ ಕೊಠಡಿಯಲ್ಲಿ ಹೋಗಿ ಕುಳಿತುಕೊಂಡು ಇಡೀ ರಾತ್ರಿ ಅಳುತ್ತಿದ್ದಳು. ಹಾಗೆ ಖನ್ನಾ ತನ್ನ ದಿವಾನಖಾನೆಯಲ್ಲಿ ವೇಶ್ಯೆಯರ ಮುಜುರಾ ಕೇಳುತ್ತಿದ್ದರು. ಅಲ್ಲದೆ ಕ್ಲಬ್ಬಿಗೆ ಹೋಗಿ ಶರಾಬು ಉಡಾಯಿಸುತ್ತಿದ್ದರು[6].

ಇಷ್ಟೆಲ್ಲಾ ಗಂಡ ಮಾಡಿದರೂ ಗೋವಿಂದಿಗೆ ಗಂಡನೇ ಸರ್ವಸ್ವವಾಗಿದ್ದನು. ಅವಳು ದಲಿತಳೂ, ಅಪಮಾನಿತಳೂ ಆಗಿದ್ದರೂ ಖನ್ನಾರವರ ದಾಸಿಯಾಗಿದ್ದಳು. ಅವರೊಡನೆ ಜಗಳವಾಡುತ್ತಾಳೆ, ಅಳುತ್ತಾಳೆ, ಹೊಟ್ಟೆ ಉರಿದುಕೊಳ್ಳುತ್ತಾಳೆ. ಆದರೂ ಅವಳು ಮಾತ್ರ ಅವರವಳೇ ಆಗಿರುತ್ತಾಳೆ. ಅವರನ್ನು ಬಿಟ್ಟು ಬದುಕುವ ಕಲ್ಪನೆ ಮಾಡಿಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಗಂಡನೇ ದೇವರು ಹಾಗೂ ಗೌರವದ ಪ್ರತೀಕವಾದಂತೆ ಕಾಣುತ್ತಿದ್ದಳು.

ಮಿಸ್ ಮಾಲತಿಯನ್ನು ಖನ್ನಾನು ತುಂಬ ಮೋಹಿಸುತ್ತಿದ್ದ. ಅದು ಗೋವಿಂದಿಗೂ ತಿಳಿದಿತ್ತು. ಇದರಿಂದ ಗಂಡ ಹೆಂಡಿರಲ್ಲಿ ಮತ್ತಷ್ಟು ಕಲಹ ಹಾಗೂ ಜಗಳ ಪ್ರಾರಂಭವಾಗಿದ್ದವು. ಮಾಲತಿಗೆ ಮದುವೆ ಆಗಿರಲಿಲ್ಲ. ಅವಳು ತನ್ನ ಅನುಕೂಲಕ್ಕಾಗಿ ಖನ್ನಾರವರೊಂದಿಗೆ ವರ್ತಿಸುತ್ತಿದ್ದಳು. ಮಾಲತಿಯು ಕೆಲವು ಬಾರಿ ಸೂಕ್ಷ್ಮವಾಗಿ ಹೇಳಿದ್ದರೂ ಖನ್ನಾ ಮಾತ್ರ ಅವಳ ವಿಷಯವನ್ನು ಬಿಟ್ಟಿರಲಿಲ್ಲ. ಹಾಗೂ ಅವಳ ಬಗ್ಗೆ ಆಸಕ್ತಿಯನ್ನು ಕಳೆದುಕೊಂಡಿರಲಿಲ್ಲ. ಹಾಗಾಗಿ ಗೋವಿಂದಿಯು ಮನೆ ಬಿಟ್ಟು ಹೋಗುವಳು. ಆ ಸಂದರ್ಭದಲ್ಲಿ ಮೆಹತಾರ ಸಲಹೆ ಕೇಳಿದಳು. ಮೆಹತಾರಿಂದ ಮಾಲತಿಗೆ ಬುದ್ಧಿ ಹೇಳುವಂತೆ ಕೇಳಿಕೊಂಡಾಗ ಮೆಹತಾ ಒಪ್ಪಿಕೊಂಡು ಸಂಭಾಳಿಸಿ ಕೊನೆಗೆ ಗೋವಿಂದಿಯನ್ನು ಮನೆಗೆ ಕಳುಹಿಸುವನು. ನಂತರ ಗೋವಿಂದಿ ತನ್ನ ಮನಸ್ಸನ್ನು ಬೇರೆ ಕಡೆಗೆ ಕೇಂದ್ರೀಕರಿಸಿಕೊಂಡು ಜೀವನ ಸಾಗಿಸುವಳು.

ನಂತರದಲ್ಲಿ ಕಾಲಕ್ರಮೇಣ ಖನ್ನಾರವರನ್ನು ಮಾಲತಿ ತಿರಸ್ಕಾರದಿಂದ ನೋಡಲು ಅದೇ ಸಮಯಕ್ಕೆ ಖನ್ನಾನ ಕಾರ್ಖಾನೆಗೆ ಬೆಂಕಿಹತ್ತಿ ಎಲ್ಲಾ ಸುಟ್ಟು ಹೋಗಿ ಖನ್ನಾರು ತುಂಬ ದುಃಖದಲ್ಲಿ ಮುಳುಗುವರು. ಇದೇ ಸಂದರ್ಭದಲ್ಲಿ ಗಂಡ ಹೆಂಡಿರಿಬ್ಬರೂ ಸರಿಯಾಗಿ ಗೋವಿಂದಿ ಖನ್ನಾರವರಿಗೆ ಸಮಾಧಾನ ಮಾಡಿ ಬೆಂಬಲಕ್ಕೆ ನಿಲ್ಲುವರು. ಆಗ ಖನ್ನಾನ ತಪ್ಪು ಅರಿವಾಗಿ ಸರಿಹೋಗಿ ಇಬ್ಬರಲ್ಲಿ ಹೊಂದಾಣಿಕೆಯು ಉಂಟಾಗಿ ಕೊನೆಗೆ ಪ್ರೀತಿಯಿಂದ ಜೀವನ ಸಾಗಿಸಲು ಮುಂದಾಗುವರು.

ಗಂಡನ ತಪ್ಪುಗಳನ್ನು ತಿದ್ದಿ ತನ್ನ ಸಂಸಾರವನ್ನು ಸರಿಪಡಿಸಿಕೊಂಡು ತನ್ನ ವಿಚಾರಗಳನ್ನು ತನ್ನ ಬರವಣಿಗೆಯಲ್ಲಿ ಮೂಡಿಸಿ ತನ್ನ ಬದುಕನ್ನು ಸರಿಪಡಿಸಿಕೊಂಡು, ಹೊಂದಿಕೊಂಡು ತಾಳ್ಮೆಯಿಂದ ಜೀವನ ಸಾಗಿಸುವಳು.

ಓಂಕಾರನಾಥರು ಗೋದಾನ ಕಾದಂಬರಿಯ ಒಂದು ಪ್ರಮುಖ ಪಾತ್ರವಾಗಿ ಕಾಣುತ್ತದೆ. ಇವರು ಬಿಜಲಿ ಪತ್ರಿಕೆಯ ಸಂಪಾದಕರು. ಇವರು ರೈತರ ಬಗ್ಗೆ ಹಾಗೂ ಅನ್ಯಾಯಗಳ ವಿರುದ್ಧ ಪತ್ರಿಕೆಯಲ್ಲಿ ಲೇಖನಗಳನ್ನು ಪ್ರಕಟಿಸುತ್ತಿದ್ದರು. ಗೋಮತಿಯು ಓಂಕಾರನಾಥರ ಮಡದಿಯಾಗಿದ್ದು ಇವರು ಬಡತನದಲ್ಲಿ ಜೀವನ ಸಾಗಿಸುತ್ತಿದ್ದರು. ಹಾಗೂ ಓಂಕಾರನಾಥರು ನ್ಯಾಯ, ನೀತಿ, ಧರ್ಮದ ಬಗ್ಗೆ ತುಂಬಾನೇ ಗೌರವ, ಅಭಿಮಾನಗಳನ್ನು ಹೊಂದಿದ್ದರು. ಜೊತೆಗೆ ಅವಮಾನ, ನಿರಾಸೆಗಳನ್ನು ಹೊಂದಿದ್ದರು. ಗೋಮತಿಯು ಶ್ರೀಮಂತಿಕೆಯ ಜೀವನವನ್ನು ಬಯಸುವ, ನೆಮ್ಮದಿ ಬದುಕು ಕಾಣುವ ಗೃಹಿಣಿಯಾಗಿದ್ದಳು. ಇಬ್ಬರಲ್ಲಿ ಈ ವಿಷಯವಾಗಿ ಅನೇಕ ಸಾರಿ ಜಗಳ ಆಗಿದ್ದೂ ಉಂಟು. ಆದರೆ ಓಂಕಾರನಾಥರು ಮಾತ್ರ ಸುಧಾರಿಸಿಕೊಂಡದ್ದೆ ಇಲ್ಲ. ಆದ್ದರಿಂದ ಬೇಸತ್ತ ಹೆಂಡತಿ ಕೆಲವು ಸಂದರ್ಭಗಳಲ್ಲಿ ಕಣ್ಣಿನ ನೋಟದಿಂದ ನೀವು ಯಾವುದಕ್ಕೂ ಕೆಲಸಕ್ಕೆ ಬಾರದವರು, ನೀವು ಬದಲಾಗುವುದಿಲ್ಲ, ನಮ್ಮ ಬದುಕು ಹೀಗೆ ಎಂಬ ಭಾವಗಳನ್ನು ಹೊರಹಾಕುತ್ತಿದ್ದಳು.

ಓಂಕಾರನಾಥರಿಗೆ ರಾಯಸಾಹೇಬರ ಮೇಲೆ ಅನಾಮಧೇಯ ಪತ್ರ ಬಂದಿತು. ಆದ್ದರಿಂದ ಲಾಭವನ್ನು ತೆಗೆದುಕೊಳ್ಳುವ ತಂತ್ರವನ್ನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದರು. ಅವರ ಪರಿಸ್ಥಿತಿ ತುಂಬ ಧಾರುಣವಾಗಿತ್ತು. ತನ್ನ ಪ್ರೆಸ್ ನೌಕರರಿಗೆ ಮೂರು ತಿಂಗಳ ಸಂಬಳ ಬಾಕಿ ಇತ್ತು. ಕಾಗದ ಕೊಟ್ಟವನಿಗೆ ಒಂದು ಸಾವಿರಕ್ಕಿಂತ ಹೆಚ್ಚು ಕೊಡಬೇಕಾಗಿತ್ತು. ಅವರು ತುಂಬ ಕಷ್ಟದ ಪರಿಸ್ಥಿತಿಯನ್ನು ಎದುರಿಸುತಿದ್ದರು.

ಗೋಮತಿಯು ಗಂಡನ ಪರಿಸ್ಥಿತಿಯನ್ನು ಒಮ್ಮೆ ಅರಿಯದೆ ಬೇರೆಯವರ ಹೆಣ್ಣು ಮಕ್ಕಳ ಒಡವೆ, ವಸ್ತುಗಳನ್ನು ನೋಡಿ ಗಂಡನಿಗೆ ಚುಚ್ಚು ಮಾತನ್ನು ಆಡುತ್ತಿದ್ದಳು. ಇವಳು ಗಂಡನ ಜೊತೆಯಲ್ಲಿ ಪ್ರೀತಿಯಿಂದ ಜೀವನ ಸಾಗಿಸಿದರೂ ತನ್ನ ಆಸೆಗಳು, ತನ್ನ ಅವಶ್ಯಕತೆಗಳ ಬಗ್ಗೆ ಬೇಸರವಾಗಿ ಗಂಡನೊಂದಿಗೆ ತುಂಬಾ ಒರಟಾಗಿ ಮಾತನಾಡುತ್ತಿದ್ದಳು. ನಂತರದಲ್ಲಿ ಅವರ ಪರಿಸ್ಥತಿಯನ್ನು ತಿಳಿದುಕೊಂಡು ನೋವು ಪಡುತ್ತಿದ್ದಳು.

ಬಡತನದಲ್ಲೂ ಇಬ್ಬರು ಪ್ರೀತಿಯ ಜೀವನ ನಡೆಸುತ್ತಿದ್ದರು. ಹಣ ಹಾಗೂ ಅವರ ಬಡತನದ ಬಗ್ಗೆ ಬೇಸರವಾದಾಗ ತುಂಬಾ ನೊಂದುಕೊಂಡು ಜೀವನದ ಹೆಜ್ಜೆಗಳನ್ನು ಹಾಕುತ್ತಿದ್ದರು. ಅನಾಮಧೇಯ ಪತ್ರದಿಂದ ಓಂಕಾರನಾಥರು ರಾಯಸಾಹೇಬರ ಅನ್ಯಾದ ವಿಚಾರಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುವ ಬದಲು ೧೫೦೦ ರೂಪಾಯಿಗಳನ್ನು ನಿರೀಕ್ಷೆ ಮಾಡಿದರು. ಹೆಂಡತಿಯೊಂದಿಗೆ ಇದರ ಬಗ್ಗೆ ಪ್ರಸ್ತಾಪ ಮಾಡಿದನು. ಆಗ ಗೋಮತಿಯು ಸಂತೋಷಪಟ್ಟು ಅನುಮಾನದ ನೋಟ

ಬೀರುವಳು. ತನ್ನ ಅನಿಸಿಕೆಗಳನ್ನು ಗಂಡನ ಹತ್ತಿರ ಹೇಳಿದಳು. ಇಬ್ಬರ ಚರ್ಚೆಯ ನಂತರ ಓಂಕಾರನಾಥರು ತುಂಬ ತಳಮಳಗೊಂಡರು. ಆಗ ಗೋಮತಿಯಯು ಗಂಡನನ್ನು ಬೆಂಬಲಿಸಿ ಮಾತನಾಡಿದಳು.

ಹೀಗೆ ಇಬ್ಬರೂ ಅನುಕೂಲಕರ ಜೀವನ ಸಾಗಿಸುತ್ತಿದ್ದರು. ಬಡತನದ ಛಾಯೆ ಅವರ ಮೇಲೆ ನೆರಳಾಗಿ ಕಾಡುತಿತ್ತು. ಅವರಲ್ಲೂ ಬಡತನದ ವಿಚಾರಗಳು ಹೆಚ್ಚಾದಾಗ ತಮ್ಮ ನೋವನ್ನೇ ನಿವಾರಿಸಿಕೊಳ್ಳಲು ಗೋಮತಿಗೂ ಸಹನೆ, ತಾಳ್ಮೆಯಿಂದ ಗಂಡನ ಕಷ್ಟದಲ್ಲಿ ಭಾಗಿಯಾಗಿ ಎಲ್ಲಾ ಸಮಸ್ಯೆಗಳನ್ನು ನಿಭಾಯಿಸಿಕೊಂಡು ಜೀವನದಲ್ಲಿ ಓಂಕಾರನಾಥರ ಜೊತೆಗೆ ಸಾಗುವಳು[೭].

೨. ಸಾಮಾಜಿಕ ನೆಲೆಯ ಸಂಬಂಧಗಳು

ಗೋದಾನ ಕಾದಂಬರಿಯು ಕೌಟುಂಬಿಕ ನೆಲೆಯ ಸಂಬಂಧಗಳ ಜೊತೆಗೆ ಸಾಮಾಜಿಕ ನೆಲೆಯ ಸಂಬಂಧಗಳನ್ನೂ ನಿರೂಪಿಸಿದೆ. ತಂದೆ ತಾಯಿ, ಗಂಡ ಹೆಂಡತಿ ಹಾಗೂ ಸಹೋದರ ಸಂಬಂಧಗಳ ಜೊತೆಗೆ, ಸಮಾಜದ ಜೊತೆಗೆ ವ್ಯಕ್ತಿ ಹೊಂದಿರುವ ಅನೇಕ ಸಂಬಂಧಗಳನ್ನು ಕಾದಂಬರಿ ಚಿತ್ರಿಸಿದೆ. ತನ್ನ ವ್ಯಾಪಾರದ ಹಾಗೂ ತನ್ನ ಅವಶ್ಯಕತೆಗಳ ದೃಷ್ಟಿಯಿಂದಾಗಿ ತನ್ನ ಕೆಲಸ ಕಾರ್ಯಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಹೀಗೆ ವ್ಯಕ್ತಿಯು ತನ್ನ ಎಲ್ಲಾ ಆಲೋಚನೆಗಳೊಂದಿಗೆ ಸಮಾಜದಲ್ಲಿ ತಾನು ಹೊಂದಿರುವ ಸಂಬಂಧಗಳನ್ನು ಗೋದಾನ ಕಾದಂಬರಿಯಲ್ಲಿ ನಿರೂಪಿಸಲಾಗಿದೆ.

ಗೋದಾನ ಕಾದಂಬರಿಯಲ್ಲಿ ಆಳು ಒಡೆಯುವ ಸಂಬಂಧದಿಂದ ಉನ್ನತ ಹಾಗೂ ಕೂಲಿ ವರ್ಗದವರ ಮಧ್ಯದಲ್ಲಿ ಉಂಟಾಗುವ ಸಂಬಂಧಗಳನ್ನು ಕಾಣಬಹುದು. ಇಲ್ಲಿ ಮನುಷ್ಯ ತನ್ನ ನೈತಿಕತೆಯನ್ನು ಬಿಟ್ಟು ಸಮಾಜದೊಂದಿಗೆ ಹೊಂದಿರುವ ಸಂಬಂಧಗಳನ್ನು ಸಹ ನೋಡಬಹುದು. ಇಲ್ಲಿರುವ ಗಂಡು ಹೆಣ್ಣಿನ ಸಂಬಂಧಗಳನ್ನು ಈ ರೀತಿಯಲ್ಲಿ ನಿರೂಪಿಸಿರುವುದನ್ನು ಕಾಣಬಹುದಾಗಿದೆ.

ಮಾತಾದೀನ ಒಬ್ಬ ಬ್ರಾಹ್ಮಣ. ಈತನು ದಾತಾದೀನ ಎಂಬ ಮುದುಕನ ಮಗ. ಅದೇ ರೀತಿ ಸಿಲಿಯಾ ಚಮ್ಮಾರ ಹರಬೊವಿಯ ಮಗಳು. ಸಿಲಿಯಾಳದು ಶ್ಯಾಮವರ್ಣ, ಚುರುಕು ಹುಡುಗಿ. ಇವಳು ರೂಪಸ್ಥೆ ಅಲ್ಲದಿದ್ದರೂ ಆಕರ್ಷಕವಾಗಿದ್ದಳು. ಅವಳ ಹಾವಭಾವದಲ್ಲಿ, ನೋಟದಲ್ಲಿ ಅಂಗಗಳ ವಿಲಾಸದಲ್ಲಿ ಹರ್ಷದ ಉನ್ಮಾದವಿತ್ತು. ಸಿಲಿಯಾ ತುಂಬಾ ಒಳ್ಳೆಯ ಹುಡುಗಿ. ಮೂರು ಜನ ಮಾಡುವ ಕೆಲಸವನ್ನು ಒಬ್ಬಳೇ ಮಾಡುವ ಸಾಮರ್ಥ್ಯ ಇವಳದ್ದಾಗಿತ್ತು[೮].

ಮಾತಾದೀನ ಅಂದರೆ ಸಿಲಿಯಾಳನ್ನು ಮೋಹಿಸಿ ಅವಳ ಜೊತೆಗೆ ಅನೈತಿಕ ಸಂಬಂಧವನ್ನು ಹೊಂದಿದ್ದ ಮತ್ತು ಅವಳು ತನ್ನ ಮನೆಯ ದನ ಕಟ್ಟುವ ಜಾಗದ ಒಂದು ಕೋಣೆಯಲ್ಲಿ ವಾಸಮಾಡುತ್ತಿದ್ದಳು. ತಂದೆ ತಾಯಿಯರ ಜೊತೆ ಅವಳು ಇರಲಿಲ್ಲ. ಸಿಲಿಯಾಳಿಗೆ ಮತಾದೀನ ರಾಣಿಯಂತೆ ಏನು ನೋಡಿಕೊಳ್ಳುತ್ತಿರಲಿಲ್ಲ.

ಅವಳಿಗೆ ಹೆಚ್ಚೆಂದರೆ ಒಂದು ವರ್ಷಕ್ಕೆ ಒಂದು ಸೀರೆ ಹಾಗೂ ಆಕೆಯ ಹೊಟ್ಟೆಗೆ ಹಾಕುತ್ತಿದ್ದನು. ಆದರೂ ಅವಳು ಮರು ಮಾತನಾಡದೆ ಅವರ ಮನೆಯಲ್ಲಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಳು.

ಗೋದಾನ ಕಾದಂಬರಿಯಲ್ಲಿ ಇದು ಒಂದು ಉತ್ಸಾಹದಿಂದ ಹಾಗೂ ಸಂತೋಷದಿಂದ ಸಾಗುವ ಪಾತ್ರವಾಗದಿದ್ದರೂ, ಒಂದು ಮನಸ್ಸಿನ ಭಾವನೆಗಳಿಗೆ ಹತ್ತಿರವಾಗುವಂತಹ ಪಾತ್ರವಾಗಿದೆ ಎಂದೂ ಹೇಳಬಹುದು. ಗೋದಾನ ಕಾದಂಬರಿಯಲ್ಲಿ ರೈತಾಪಿ ವರ್ಗದವರಿಗೆ ಮಾತ್ರ ನೈತಿಕತೆ ಕಟ್ಟುಪಾಡಿದ್ದು, ನ್ಯಾಯ ಧರ್ಮಗಳ ಒಂದು ಸಮೀಕ್ಷೆಗೆ ಎಲ್ಲರನ್ನು ಒಳಪಡಿಸಿ ಶೋಷಣೆ ಮಾಡುವರು. ಮೇಲ್‌ವರ್ಗದ ಶ್ರೀಮಂತರ ಮಕ್ಕಳು ನೈತಿಕತೆ, ಧರ್ಮದ ಚೌಕಟ್ಟನ್ನು ಮೀರಿ ನಡೆದರೂ ಅದರಿಂದ ಯಾವ ಪ್ರಶ್ನೆಯಾಗಲಿ, ಯಾವುದೇ ತಕರಾರಾಗಲಿ ಹುಟ್ಟುವುದಿಲ್ಲ. ಬೇರೆ ಜಾತಿಯ ಹೆಣ್ಣನ್ನು ಮನೆಯಲ್ಲಿಯೇ ಇರಿಸಿಕೊಳ್ಳುವುದೂ ಅದಕ್ಕೆ ಯಾವ ಸಂಬಂಧದ ಹಣೆಪಟ್ಟಿಯನ್ನು ನೀಡದೆ ಹೆಣ್ಣನ್ನು ಒಂದು ಭೋಗದ ಹಾಗೂ ತನ್ನ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲಿ ಸಾಗುವಂತಹ ಪಾತ್ರ ಮತಾದೀನನದ್ದು. ದಾತಾದೀನ ಇಬ್ಬರೂ ಬ್ರಾಹ್ಮಣರಾದರೂ ಬೇರೆ ಜಾತಿಯ ವರೊಂದಿಗೆ ಈ ರೀತಿಯ ಸಂಬಂಧ ಹೊಂದಿರುವುದು ಸಮಾಜದ ದೃಷ್ಟಿಯಲ್ಲಿ ಯಾವುದೇ ಕಲ್ಪನೆ ಮೂಡುವುದಿಲ್ಲ. ಯಾವುದೆ ತೊಂದರೆಗಳಾಗುವುದಿಲ್ಲ. ಆದರೆ ಹೋರಿಯ ಮಗ ಗೋಬರ ಮಾಡಿದ ತಪ್ಪಿಗೆ ದಂಡ ಹಾಕಿ ಜಾತಿಯಿಂದಲೇ ದೂರ ತಳ್ಳುವಂತಹ ಕ್ರಿಯೆ ನಡೆಯುತ್ತದೆ. ಇಲ್ಲಿ ಸಹ ತಾರತಮ್ಯವಾಗಿ ಶ್ರೀಮಂತ ಬಡವ ಎಂಬ ಭೇದವನ್ನು ಹಿಡಿದು ನ್ಯಾಯವನ್ನು ನೀಡುವಲ್ಲಿ ಮುಂದಾಗುವರು. ದಾತಾದೀನ ಸಿಲಿಯಾಳ ಬಗ್ಗೆ ತನ್ನ ಅಭಿಪ್ರಾಯವನ್ನು ಹೀಗೆ ಹೇಳುವನು. 'ನನ್ನ ಮಗನಿಗೆ ಮದುವೆ ಮಾಡಿದ ಸೊಸೆ ಬಹಳ ಎಂದರೆ ಸೊಸೆ ಆಗಿ ಮನೆಯಲ್ಲಿ ಕುಳಿತುಕೊಂಡಿರುತ್ತಾಳೆ. ಬಹಳ ಎಂದರೆ ರೊಟ್ಟಿ ಸುಡುತ್ತಾಳೆ. ಆದರೆ ಸಿಲಿಯಾಳಿಂದ ಆಗುವಷ್ಟು ಉಪಕಾರ ಬ್ರಾಹ್ಮಣರ ಹುಡುಗಿಯಿಂದ ಆಗುತ್ತದೆಯೇ?' ಎಲ್ಲ ಕೆಲಸವನ್ನು ಸಿಲಿಯ ನಿಭಾಯಿಸುವ ಶಕ್ತಿ ಇದೆ ಎಂದು ಹೇಳುವನು.

ಇಂತಹ ಸಂದರ್ಭದಲ್ಲಿ ಜಾತಿಯ ಪ್ರಶ್ನೆಯೇ ಉಂಟಾಗುವುದಿಲ್ಲ. ಆದರೆ ತನ್ನ ಕೆಲಸ ಕಾರ್ಯಗಳ ಜೊತೆಗೆ ಅವಳನ್ನು ಭೋಗಿಸುವ ಸಂದರ್ಭದಲ್ಲೂ ಅವಳ ಜಾತಿ ಅಡ್ಡಿ ಬರುವುದಿಲ್ಲ. ಅವಳು ನೀರು ಮುಟ್ಟಿದರೆ ಕುಡಿಯುವುದಿಲ್ಲ. ಅವಳು ಅಡಿಗೆ ಮಾಡಿದರೆ ಊಟ ಮಾಡುವುದಿಲ್ಲ. ಇಲ್ಲಿ ಪವಿತ್ರತೆ, ಮಡಿ ಮೈಲಿಗೆ ಜಾಗೃತಗೊಳ್ಳುತ್ತದೆ. ಅದೇ ಬೇರೆ ವಿಷಯದಲ್ಲಿ ಅದು ಒಂದು ವಸ್ತುವಿನಂತೆ ಕಾಣುತ್ತದೆ. ಇದಲ್ಲದೆ ಯಾವುದೇ ಅಧಿಕಾರ ಸಹ ಅವಳಿಗೆ ಇರುವುದಿಲ್ಲ. ಹೀಗೆ ಒಂದು ಹೆಣ್ಣನ್ನು ನಡೆಸಿಕೊಳ್ಳುವಂತಹ ಶ್ರೀಮಂತರು ಮುಗ್ದರ ಜೀವನದ ಜೊತೆಗೆ ಚಲ್ಲಾಟವಾಡುವರು.

'ಮಾತಾದೀನ ಹೇಳುವನು. ಸಿಲಿಯಾ ಇಂದು ಸಂಜೆಯ ಹೊತ್ತಿಗೆ ಒಂದೇ ಒಂದು ಕಾಳೂ ಉಳಿಯಬಾರದು. ನಿನಗೆ ಸುಸ್ತಾಗಿದ್ದರೆ ನಾನು ಬರಲೇ'[99] ಎಂದು ಹೇಳಿದಾಗ ಸಿಲಿಯಾ ಖುಷಿಯಾಗಿ ತನ್ನ ಎಲ್ಲಾ ಶ್ರಮವನ್ನು ಮರೆತು ತನ್ನ ಮೇಲೆ ಅಕ್ಕರೆಯಿಂದ ಪ್ರೀತಿಯಿಂದ ಮಾತನಾಡಿದನು. ಆಗ ಅವಳು ಎಲ್ಲಾ ಕೆಲಸವವನ್ನು ತಾನೇ ಮಾಡುವುದಾಗಿ ಹೇಳುವಳು. ಸಿಲಿಯಾ ಹೋಳಿ ಹಬ್ಬದ ದಿನ ದುಲಾರಿಯ ಅಂಗಡಿಯಿಂದ ಆರು ಕಾಸಿಗೆ ಗುಲಾಬಿ ಬಣ್ಣ ತಂದಿದ್ದಳು. ಅವಳಿಗೆ ಒಂದು ತಿಂಗಳಾದರೂ ಕಾಸು ಕೊಟ್ಟಿರಲಿಲ್ಲ. ದುಲಾರಿ ಸಿಲಿಯಾಳ ಹತ್ತಿರ ಕೇಳಿದಳು. 'ಏನೆ ಸಿಲಿಯಾ, ಬಣ್ಣ ತೆಗೆದುಕೊಂಡು ಹೋಗಿ ಒಂದು ತಿಂಗಳೇ ಕಳೆದು ಹೋಯಿತು. ಕೇಳಿದರೆ ಬಳುಕುತ್ತಾ ಹೊರಟು ಹೋಗುತ್ತಿಯಾ ಎಂದು ಕೇಳಿದಾಗ, ಸಿಲಿಯಾ ಧಾನ್ಯವನ್ನು ತೂರುತ್ತಿದ್ದಳು. ಒಂದು ಸೇರು ಧಾನ್ಯವನ್ನು ರಾಶಿಯಿಂದ ತೆಗೆದು ದುಲಾರಿಯ ಸೆರಗಿಗೆ ಹಾಕಿದಳು. ಅದೇ ಸಮಯಕ್ಕೆ ಮಾತಾದೀನ ಮರದ ಮರೆಯಿಂದ ಬುಸುಗುಟ್ಟುತ್ತಾ ಹೊರಬಂದು ದುಲಾರಿ ಹಾಗೂ ಸಿಲಿಯಾಳ ಮೇಲೆ ಗದರಿದ[99].

ಮಾತಾದೀನನು ಸಿಲಿಯಾಳ ತನುಮನವನ್ನು ತೆಗೆದುಕೊಂಡಿದ್ದರೂ ಅದಕ್ಕೆ ಪ್ರತಿಯಾಗಿ ಏನನ್ನೂ ಕೊಡಲು ಅವನಿಗೆ ಮನಸ್ಸಿರಲಿಲ್ಲ. ಇವನ ದೃಷ್ಟಿಯಲ್ಲಿ ಸಿಲಿಯಾ ಕೆಲಸ ಮಾಡುವ ಯಂತ್ರದಂತೆ ಇದ್ದಳೆ ಹೊರತು ಬೇರೆ ಯಾವ ಹಿತಾಸಕ್ತಿಯೂ ಅವನಲ್ಲಿ ಇರಲಿಲ್ಲ. ಸಿಲಿಯಾಳಿಗೆ ಯಾವುದೇ ಅಧಿಕಾರ ಇರಲಿಲ್ಲ. ಹಾಗೂ (ಕಡಿಮೆಯಾದರೆ) ನಾನು ಹೊಟ್ಟೆ ಬಟ್ಟೆಗೆ ಕೊಡುತ್ತಿದ್ದೇನೆ. ಯಾರನ್ನು ಕೇಳಿ ಧಾನ್ಯ ಕೊಟ್ಟೆ ಎಂದು ಪ್ರಶ್ನಿಸಿದಾಗ ಅವಳಿಗೆ ತುಂಬ ನೋವಾಗುತ್ತದೆ. ಬೇರೆ ಕಡೆ ಹೋಗಿ ಕೂಲಿ ಮಾಡು, ಕೂಲಿಗಳು ಸಾಕಷ್ಟು ಸಿಗುತ್ತಾರೆ ಎಂದು ಹೇಳಿದಾಗ ಸಿಲಿಯಾಳ ಪರಿಸ್ಥಿತಿ ರೆಕ್ಕೆ ಮುರಿದು ಪಂಜರದಿಂದ ಹೊರಕ್ಕೆ ಹಾಕಿದ ಹಕ್ಕಿಯಂತೆ ತನ್ನ ಒಡೆಯನ ಮುಖವನ್ನು ನೋಡುವಳು. ಆದರೆ ಅಲ್ಲಿ ಕೇವಲ ಸ್ವಾರ್ಥವಲ್ಲದೆ ಬೇರೇನೂ ಕಂಡುಬರುವುದಿಲ್ಲ. ಸಿಲಿಯಾಳ ತಂದೆ ಮಾತಾದೀನನ್ನು ಅವಮಾನ ಮಾಡಿದಾಗ ಸಿಲಿಯಾಳನ್ನು ಮನೆಯಿಂದ ಹೊರಗೆ ಹಾಕುವನು. ಅವಳು ಎಷ್ಟು ಬೇಡಿಕೊಂಡರೂ ಕೇಳುವುದಿಲ್ಲ. ನಂತರದಲ್ಲಿ ಮತಾದೀನನ ಮಗುವಿಗೆ ಜನ್ಮ ನೀಡುವಳು. ನಂತರ ಹೋರಿಯ ಆಶ್ರಯದಲ್ಲಿ ಇರುತ್ತಾಳೆ. ಮತಾದೀನನಿಗೆ ಆ ಮಗುವನ್ನು ನೋಡುವ, ಎತ್ತಿಕೊಳ್ಳುವ ಆಸೆಯಾಗುವುದು. ತನ್ನ ತಪ್ಪಿಗಾಗಿ ಮರುಗುವನು. ಆದರೆ ಸಮಾಜಕ್ಕೆ ಹೆದರಿ ತನ್ನ ಆಸೆಗಳನ್ನು ಮನಸ್ಸಿನಲ್ಲಿಯೇ ನುಂಗಿಕೊಳ್ಳುವನು. ಸಿಲಿಯಾಳ ಮಗು ಮಾತಾದೀನನನ್ನು ಹೋಲುವಂತಿದ್ದು ಕಾಯಿಲೆ ಬಂದು ತೀರಿ ಹೋಗುವುದು. ಅದರಿಂದಲೂ ಸಿಲಿಯಾ ತುಂಬ ನೋವನ್ನು ಅನುಭವಿಸುವಳು. ಆಗ ಮಾತಾದೀನ ಅವಳನ್ನು ಮಾತನಾಡಿಸಿ ಒಟ್ಟಿಗೆ ಜೀವನ ನಡೆಸುವ ನಿರ್ಧಾರಕ್ಕೆ ಬರುವನು. ಇಲ್ಲಿ ಮಾತಾದೀನನು ಪಶ್ಚಾತ್ತಾಪ ಪಡದೆ ತನ್ನ ಒಂದು ತಪ್ಪನ್ನು ಸರಿಪಡಿಸಿಕೊಳ್ಳಲು

ಮುಂದಾಗುವನು. ಕೊನೆಗೆ ಇಬ್ಬರು ಜೀವನವನ್ನು ನಡೆಸಲು ಒಂದಾಗುವರು. ಇಲ್ಲಿ ಪ್ರೀತಿಯ ಮುಂದೆ ಜಾತಿ ಹಾಗೂ ನೈತಿಕತೆಯು ಮುರಿದು ಬೀಳುವುದು ಚಿತ್ರಿತವಾಗಿದೆ.

ಖನ್ನಾನು ವಿಲಾಸಿ ಜೀವನದ ಒಡೆಯಾಗಿ ಕಾಣಿಸಿಕೊಳ್ಳುತ್ತಾನೆ. ಇವನ ಹೆಂಡತಿ ಗೋವಿಂದಿ. ಆದರೆ ಖನ್ನಾ ಅವರಿಗೆ ಮಾಲತಿಯ ಮೇಲೆ ಮೋಹ. ಈ ಮಾಲತಿ ವೃತ್ತಿಯಲ್ಲಿ ವೈದ್ಯೆ. ಇವಳ ತಂದೆ ಲೇವಾದೇವಿ ವ್ಯಾಪಾರಿಯಾಗಿದ್ದು ಖಾಯಿಲೆಯಿಂದ ಬಳಲುತ್ತಾ ಇರುತ್ತಾನೆ. ಇವಳಿಗೆ ಇಬ್ಬರು ತಂಗಿಯಂದಿರು ಹಾಗೂ ಅವಳ ತಾಯಿಯನ್ನು ಚನ್ನಾಗಿ ನೋಡಿಕೊಳ್ಳುವ ಬಯಕೆ ಇವಳದು.

ಡಾ. ಮಾಲತಿ ತನ್ನ ಮನೆಯನ್ನು ನಿಭಾಯಿಸುವ ಹಾಗೂ ತನ್ನ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ನಾಲ್ಕು ಜನರ ಹತ್ತಿರ ಪ್ರೀತಿಯಿಂದ ಸಲುಗೆಯಿಂದ ಇರುತ್ತಾಳೆ. ಮಾಲತಿ ಖನ್ನಾರೊಂದಿಗೆ ಸ್ನೇಹ ಪ್ರೀತಿ ಹಾಗೂ ಸಲುಗೆಯಿಂದ ವ್ಯವಹರಿಸುವಳು. ಆದರೆ ಖನ್ನಾ ಅವರಿಗೆ ಮಾಲತಿಯ ಮೇಲೆ ಅಪಾರ ಪ್ರೀತಿ ಮೋಹ ಇತ್ತು.

ಖನ್ನಾ ತನ್ನ ಸಂಸಾರವನ್ನು ಲೆಕ್ಕಿಸದೆ ಹೆಂಡತಿಯನ್ನು ಪ್ರೀತಿಯಿಂದ ಕಾಣದೆ ಮಾಲತಿಯನ್ನು ಹಿಂಬಾಲಿಸುವನು. ಈ ಇಬ್ಬರ ಸಂಬಂಧವೂ ಸಹ ವಿಚಿತ್ರವಾಗಿದೆ. ಇಬ್ಬರೂ ಪ್ರೀತಿ ನಾಟಕದಲ್ಲಿ ತಮ್ಮ ತಮ್ಮ ಅವಶ್ಯಕತೆಯನ್ನು ಪಡೆದುಕೊಳ್ಳಲು ಪಯತ್ನ ಮಾಡುವರು. ಶ್ರೀಮಂತ ವರ್ಗದವರಲ್ಲಿ ನೈತಿಕತೆಯ ಅಂಶಗಳು ಕಾಣುವುದಿಲ್ಲ ಎಂಬುದಕ್ಕೆ ಇದು ಒಂದು ಉದಾಹರಣೆ. ಮಾಲತಿ ತನ್ನ ಸಂಸಾರವನ್ನು ಪೋಷಿಸಲು ಖನ್ನಾ ಅವರ ನಡುವಿನ ಸಂಬಂಧವನ್ನು ಮನಸ್ಸು ಒಪ್ಪದೆ ಹೋದರೂ ಅಂಗೀಕರಿಸುವಳು. ಅನೇಕ ಸಂದರ್ಭದಲ್ಲಿ ಖನ್ನಾರನ್ನು ಮಾಲತಿ ವಿರೋಧಿಸುವಳು. ಅವಳು ಖನ್ನಾರನ್ನು ಅವಮಾನಗೊಳಿಸಿದರೂ ಅವಶ್ಯಕತೆ ಬಿದ್ದಾಗ ಖನ್ನರ ಜೊತೆಗೆ ಪ್ರೀತಿಯಿಂದ ಮತನಾಡುವಳು. ಅದೇ ರೀತಿ ಖನ್ನಾ ಸಹ ಮಾಲತಿ ಏನೇ ಮಾಡಿದರೂ ಅವಳು ಮೋಹ ಬಿಡದೆ ವರ್ತಿಸುವುದು ಗೋಚರಿಸುತ್ತದೆ.

ಆದರೆ ಮುಂದೆ ಸಾಗುತ್ತಾ ಮೆಹತಾ ಅವರ ಬುದ್ಧಿವಾದದಿಂದ ಹಾಗೂ ಗೋವಿಂದಿಯ ಯಾತನೆಯನ್ನು ತ್ಳಿದು ಕೊನೆಗೆ ಖನ್ನಾ ಹಾಗೂ ಮಾಲತಿ ತಮ್ಮ ತಪ್ಪನ್ನು ಸರಿಪಡಿಸಿಕೊಳ್ಳುವರು. ಮಾಲತಿಯೂ ಸಹ ತನ್ನ ಅವಶ್ಯಕತೆಗಳಿಗಿಂತ ಹೆಚ್ಚಾಗಿ ಆತ್ಮಸುಖ ಹಾಗೂ ಸೇವೆಯಲ್ಲಿ ನಿರತಳಾಗುವಳು. ಕೊನೆಗೆ ಖನ್ನಾ ಹಾಗೂ ಮಾಲತಿಯರ ಮಧ್ಯೆ ಇರುವ ಸಂಬಂಧ ಸ್ನೇಹರೂಪಕ್ಕೆ ತಿರುಗಿಕೊಳ್ಳುವುದು. ನಂತರ ಖನ್ನಾ ತನ್ನ ಸಂಸಾರವನ್ನು ಹಾಗೂ ಗೋವಿಂದಿಯನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾ ಸಾಗುವನು.

ನೋಹಾರಿ ಭೋಲನ ಎರಡನೆ ಹೆಂಡತಿ. ಇವಳು ಒಬ್ಬ ವಿದವೆ. ಇವಳಿಗೆ ಒಂದು ಮಗು ಇದೆ. ಭೋಲನಿಗೆ ಮಕ್ಕಳು, ಸೊಸೆ ಹಾಗೂ ಮೊಮ್ಮಕ್ಕಳೂ ಇದ್ದರು. ಇಬ್ಬರಿಗೂ ವಯಸ್ಸಿನಲ್ಲಿ ವ್ಯತ್ಯಾಸ ಇದೆ. ಭೋಲನ ಎರಡನೇ ಮದುವೆಯಿಂದ

ಕೋಪಗೊಂಡ ಅವನ ಮಕ್ಕಳು, ಅವನನ್ನು ಮನೆಯಿಂದ ಹೊರಗೆ ಹಾಕಿದರು. ಆಗ ಭೋಲ ಊರಿನ ಪ್ರಮುಖನಾದ ನೋಖೇರಾಮನ ಹತ್ತಿರ, ನನ್ನ ಮಗನಿಗೆ ಬುದ್ಧಿ ಹೇಳಿ ಎಂದು ಕೇಳಿಕೊಳ್ಳಲು ಹೋಗುವನು. ನೋಖೇರಾಮ ಭೋಲಾನ ಹೆಂಡತಿಯನ್ನು ನೋಡಿ ಅವನಿಗೆ ತನ್ನ ಮನೆಯಲ್ಲಿಯೇ ಆಶ್ರಯ ನೀಡುವನು.

ನೋಖೇರಾಮ ಒಬ್ಬ ಲೇವಾದೇವಿ ಮಾಡುವ ವ್ಯಕ್ತಿ. ನೋಹಾರಿಯು ತುಂಬ ಚುರುಕು ಹಾಗೂ ಸುಂದರವಾಗಿದ್ದ ಕಾರಣ ಅವಳ ಮೇಲೆ ಮೋಹಗೊಂಡು ಅವಳನ್ನು ತನ್ನ ವಿಲಾಸಿ ಜೀವನಕ್ಕೆ ಎಳೆದುಕೊಳ್ಳುವನು. ಆದರೆ ಇವರ ಸಂಬಂಧದ ಬಗ್ಗೆ ತಿಳಿದ ಭೋಲ ಹೆಂಡತಿಯನ್ನು ವಿರೋಧಿಸಿದರೂ ನೋಹಾರಿ ತನ್ನ ಗಂಡನನ್ನು ಎಕ್ಕಡದಿಂದ ಹೊಡೆದು ಅವನನ್ನೇ ನಿಯಂತ್ರಣದಲ್ಲಿ ಇಡುವಳು. ಇಡೀ ಹಳ್ಳಿಗೆ ವಿಷಯ ತಿಳಿದಿದ್ದರೂ ಇವರ ಸಂಬಂದಧ ಬಗ್ಗೆ ಯಾವುದೇ ರೀತಿಯ ವಿರೋಧಗಳು ಕಂಡುಬರುವುದಿಲ್ಲ. ಇಲ್ಲಿ ಶ್ರೀಮಂತರ ಬಲೆಗೆ ಬಡವ ಬಿದ್ದು ತನ್ನ ಜೀವನದ ಮೌಲ್ಯಗಳನ್ನು ಕಳೆದುಕೊಳ್ಳುವ ಪರಿಸ್ಥಿತಿಯನ್ನು ಕಾಣಬಹುದು. ಈ ಸಂಬಂಧವು ಅನೈತಿಕವಾಗಿದ್ದರೂ ಇಲ್ಲಿ ನೋಹಾರಿ ತನ್ನ ಬದುಕಿನ ಆಸೆಗಳನ್ನು ಈಡೇರಿಸಿಕೊಳ್ಳಲು ತಪ್ಪು ದಾರಿ ಹಿಡಿದಿರುವುದು ಕಾಣುತ್ತದೆ. ಆದರೆ ಮೇಲ್‌ವರ್ಗದವರು ಯಾವುದೇ ಸಂಬಂಧ ಹೊಂದಿದರೂ ಅಲ್ಲಿ ಯಾವ ನೈತಿಕತೆಗೆ ಪೆಟ್ಟು ಬೀಳುವುದಿಲ್ಲ. ಆದರೆ ಅದೇ ತಪ್ಪನ್ನು ಬಡವರು ಕೂಲಿ ಕಾರ್ಮಿಕರು ಮಾಡಿದರೆ ಅವರಿಗೆ ಶಿಕ್ಷೆಯಾಗುತ್ತದೆ.

ಮೇಲ್ ಜಾತಿಯ ಗಂಡಸರು ಕೆಳವರ್ಗದ ಮಹಿಳೆಯರನ್ನು ಶೋಷಣೆ ಮಾಡುವುದು ಅವರಿಗೆ ವಿಲಾಸಿ ಹಾಗೂ ಪ್ರೀತಿಯ ಮಾತುಗಳೊಂದಿಗೆ ಅವರನ್ನು ಹಾಳು ಮಾಡುವ ಒಂದು ಸಂದರ್ಭವನ್ನು ಕಾಣಬಹುದು.

ಬಡವರು ಶ್ರೀಮಂತರ ತಾಳಕ್ಕೆ ಕುಣಿಯಲು, ನಡೆಯಲು ಸಿದ್ಧರಿರಬೇಕು. ಇಲ್ಲವಾದರೆ ಹಳ್ಳಿಯಲ್ಲಿ ಅವರು ಜೀವನ ಮಾಡುವುದು ಕಷ್ಟವಾಗುತ್ತದೆ. ಅವರು ತಮ್ಮ ಬದುಕನ್ನು ಕಬಳಿಸಿದರೂ ತಮ್ಮ ಸಂಸಾರವನ್ನು ಹಾಳು ಮಾಡಿದರೂ ಅವರು ತೊಂದರೆ ಅನುಭವಿಸಲೇಬೇಕಾಗುತ್ತದೆ. ಇಂತಹ ಪರಿಸ್ಥಿತಿ ಬಂದಾಗ ಕೆಲವರು ವಿರೋಧಿಸದೆ ಅದನ್ನು ಮಾನಸಿಕವಾಗಿ ಒಪ್ಪಿಕೊಳ್ಳುವಂತಹದ್ದು ಕಂಡುಬರುತ್ತದೆ.

ಗೋವಿಂದಿಯು ಖನ್ನಾರ ಹೆಂಡತಿ. ಮೆಹತಾ ಒಬ್ಬ ತತ್ವಶಾಸ್ತ್ರದ ಅಧ್ಯಾಪಕರು. ಇಲ್ಲಿ ಮೆಹತಾ ಅವರು ಗೋವಿಂದಿಯ ನಡುವಳಿಕೆ, ಸ್ವಭಾವಕ್ಕೆ ಮಾರುಹೋಗುವರು. ಮೆಹತಾ ಅವಳ ಉತ್ತಮ ಗುಣಗಳನ್ನು ಆರಾಧಿಸುವರು. ಗೋವಿಂದಿ ತನ್ನ ವ್ಯಕ್ತಿತ್ವ ಹಾಗೂ ತನ್ನ ನೈತಿಕತೆಯನ್ನು ತೊರೆಯಲು ಮನಸ್ಸು ಮಾಡುವುದಿಲ್ಲ. ಹಾಗೂ ಮೆಹತಾರನ್ನು ಒಬ್ಬ ಸ್ನೇಹಿತನಂತೆ ಕಾಣುತ್ತಾಳೆ. ತನ್ನ ಭಾವಗಳಿಗೆ ಉತ್ತರ ಸಿಕ್ಕಾಗ, ಮೆಹತಾ ತನ್ನ ತಪ್ಪಿನ ಅರಿವಾದಾಗ ಸಮಾಜದಲ್ಲಿ ಈ ರೀತಿಯ ಸಂಬಂಧಗಳನ್ನು ಕಂಡು ಗೋವಿಂದಿ ಅದನ್ನು ವಿರೋಧಿಸುವಳು. ಮಾಲತಿಯಿಂದ ಗೋವಿಂದಿಯ ಸಂಸಾರವನ್ನು ಸರಿಮಾಡುವ ಹೊಣೆಯನ್ನು ಮೆಹತಾರು ಹೊತ್ತುಕೊಳ್ಳುವರು. ತಮ್ಮ

ವಿಚಾರಗಳಿಗೆ ಅನುಗುಣವಾಗಿ ಸಮಾಜ ರೂಪುಗೊಳ್ಳಲು ಸಾಧ್ಯವಿಲ್ಲ. ಸಮಾಜದ ನೀತಿ, ನೈತಿಕತೆ ಹಿನ್ನೆಲೆಯಲ್ಲಿ ಸಮಾಜದ ಕಟ್ಟುಪಾಡುಗಳೊಂದಿಗೆ ಜೀವನ ಸಾಗಿಸಬೇಕು. ಆದರೆ ಶ್ರೀಮಂತರಲ್ಲಿ ಈ ರೀತಿಯ ಸಂಬಂಧಗಳು ಇರುವುದು ಕಂಡುಬರುತ್ತದೆ. ಶ್ರೀಮಂತರಲ್ಲೂ , ಮೆಹತಾರಂತಹ ವ್ಯಕ್ತಿಗಳನ್ನೂ ಕಾಣಬಹುದು. ಮೆಹತಾ ಅವರು ಗೋವಿಂದಿಯನ್ನು ಇಷ್ಟಪಟ್ಟರೂ ಕೊನೆಗೆ ತನ್ನ ತಪ್ಪಿನ ನಿರ್ಧಾರವನ್ನು ಬದಲಿಸಿಕೊಂಡು ಗೋವಿಂದಿಗೆ ಒಬ್ಬ ಸ್ನೇಹಿತನಂತೆ ರೂಪಗೊಳ್ಳುವುದು ಈ ಸಂಬಂಧದಲ್ಲಿ ಕಂಡುಬರುತ್ತದೆ.

ಮನೆಯನ್ನು ಬಿಟ್ಟು, ಗಂಡನನ್ನು ಬಿಟ್ಟು ಬಂದ ಗೋವಿಂದಿಗೆ ತನ್ನ ಮನೆಗೆ ಹಿಂದಿರುಗುವಂತೆ ಮೆಹತಾ ಅವರು ತಿಳುವಳಿಕೆ ನೀಡುತ್ತಾರೆ. ಇವರಿಬ್ಬರ ಸಂಬಂಧವು ಅನೈತಿಕವಾಗಿರದೆ ಒಂದು ಒಳ್ಳೆಯ ಸಂಬಂಧವಾಗಿದೆ.

ಮೆಹತಾ ಇವರು ಯೂನಿವರ್ಸಿಟಿಯಲ್ಲಿ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದು, ಇವರು ತತ್ವಗಳ ಅಳವಡಿಕೆಯಿಂದ ಜೀವನ ಸಾಗಿಸುವ ವ್ಯಕ್ತಿಯಾಗಿದ್ದಾರೆ. ಹಾಗೂ ಉತ್ತಮ ಗುಣಗುಳುಳ್ಳ ಹಾಗೂ ನೀತಿಪರ ಆಲೋಚನೆಗಳನ್ನು ಮಾಡುವ ವ್ಯಕ್ತಿಯಾಗಿದ್ದು, ಡಾ. ಮಾಲತಿಯವರು ಮೆಹತಾ ಅವರ ವಿಚಾರಗಳಿಗೆ ಮಾರುಹೋಗುವರು. ಇವರಿಬ್ಬರು , ರಾಯಸಾಹೇಬರ ಅತಿಥಿಗಳಾಗಿ ಆಗಮಿಸಿದಾಗ ಇವರಿಗೆ ಪರಸ್ಪರ ಪರಿಚಯವಾಗುತ್ತದೆ. ಮಾಲತಿ ಇವರನ್ನು ನೋಡಿ ಅವರನ್ನು ಅರ್ಥಮಾಡಿಕೊಳ್ಳಲು ಹಾಗೂ ಅವರ ಸ್ನೇಹ ಸಂಪಾದನೆ ಮಾಡಲು ಮುಂದಾಗುವಳು. ಆದರೆ ಮೆಹತಾ ತನ್ನ ಸ್ನೇಹಿತೆ ಹಾಗೂ ಹೆಂಡತಿಯಾಗುವವಳು ಇಂತಿಷ್ಟು ಅರ್ಹತೆಗಳನ್ನು ಹೊಂದಿರಬೇಕು ಎಂದು ಮೊದಲೇ ಅಂದುಕೊಂಡಿರುತ್ತಾರೆ. ಹಾಗಾಗಿ ಅವರು ಮಾಲತಿಯ ಮೇಲೆ ಅಷ್ಟೇನೂ ಆಕರ್ಷಕರಾಗುವುದಿಲ್ಲ. ಆದರೆ ಮಾಲತಿ ಮಾತ್ರ ಪರಿಚಯವಾದ ದಿನದಿಂದಲೂ ಮೆಹತಾರವರನ್ನು ಇಷ್ಟ ಪಡುತ್ತಾ ಅವರ ಸಲಿಗೆಯನ್ನು ಬಯಸುತ್ತಿದ್ದಳು.

ಮೆಹತಾರವರಿಗೆ ಮಾಲತಿ ಅಹಂಕಾರದ ಸ್ವಭಾವ ಕಂಡು ಅವರ ಬಗ್ಗೆ ಅಭಿಮಾನವಿತ್ತೆ ವಿನಹ ಪ್ರೀತಿ ಇರಲಿಲ್ಲ. ಇವರ ನಡುವೆ ಸಣ್ಣಪುಟ್ಟ ವಾದಗಳು ನಡೆಯುತ್ತಲೇ ಇದ್ದವು. ಹಾಗೂ ಮಾಲತಿ ಮೆಹತಾ ಅವರನ್ನು ಖಂಡಿಸಿ ವಿರೋಧಿಸಿ ಮಾತನಾಡುತ್ತಿದ್ದರು. ಅವರ ಸ್ನೇಹ ಪರಿಚಯ ಮುಂದೆ ಸಾಗುತ್ತಲೇ ಇತ್ತು. ನಂತರದಲ್ಲಿ ಮೆಹತಾ ಅವರ ವಿಚಾರಗಳನ್ನು ತಿಳಿದುಕೊಳ್ಳತ್ತಾ ಹೋದ ಮಾಲತಿ ದಿನೇ ದಿನೇ ಬದಲಾವಣೆ ಹೊಂದುತ್ತಾ ಹೋಗುವಳು. ಅವರ ಪರಿಚಯದಿಂದ ಅವರ ಹಾಗೂ ಬುದ್ಧಿ ಮಾತಿನಿಂದ ಎಲ್ಲಾ ಗಂಡಸರ ಜೊತೆಯಲ್ಲಿ ಮೊದಲಿನಂತೆ ನಡೆದುಕೊಳ್ಳದೆ ಉತ್ತಮ ರೀತಿಯ ವಿಚಾರಗಳನ್ನು ಅಳವಡಿಸಿಕೊಳ್ಳುವಳು. ಬಡವರ ಸೇವೆ ಮಾಡಿ ಅವರ ಸಂತೋಷದಲ್ಲಿ ಭಾಗಿಯಾಗುವಳು. ನಂತರ ಹಳ್ಳಿಯಲ್ಲಿ ಹೆಣ್ಣು ಮಕ್ಕಳಿಗೆ ಸಲಹೆ ಸೂಚನೆಗಳನ್ನು ನೀಡುವುದು, ಮಕ್ಕಳನ್ನು ಪ್ರೀತಿಯಿಂದ ಕಾಣುವುದು

ಹಾಗೂ ಸೇವೆಯಲ್ಲಿ ಸಂತೋಷ ಕಾಣುವುದನ್ನು ಮಾಲತಿ ಕಲಿತಳು. ಮೆಹತಾ ಅವರಿಂದ ಕಲಿತ ಪಾಠವನ್ನು ಕೊನೆಗೆ ಅವರಿಗೇ ಹೇಳುವ ಸಂದರ್ಭ ಸಹ ಎದುರಾಗುತ್ತದೆ. ನಿಸ್ವಾರ್ಥ ಸೇವೆ ಈಗ ಮಾಲತಿಯವರದ್ದಾಗಿದೆ. ಮೆಹತಾ ಅವರು ಮಾಲತಿಯ ಮನೆಯಲ್ಲಿ ಇದ್ದರೂ ಮಾಲತಿ ಮೊದಲಿನಂತೆ ಈಗ ಕಾಣುವುದು ಕಷ್ಟದ ಕೆಲಸವಾಗಿತ್ತು.

ಈಗ ಮಾಲತಿಯನ್ನು ತಿರಸ್ಕರಿಸುತ್ತಿದ್ದ ಮೆಹತಾ ಅವಳ ಸಂಪೂರ್ಣ ಬದಲಾವಣೆಯನ್ನು ಕಂಡು ಮನಸೋತರು. ಮಕ್ಕಳ ಮೇಲೆ ಅವಳು ತೋರಿಸುವ ಅಕ್ಕರೆ ಪ್ರೀತಿ ಹಾಗೂ ಅವಳ ಸೇವಾ ಗುಣಗಳು ಇವುಗಳನ್ನು ನೋಡಿ ಮೆಹತಾ ಅವರು ಅವಳನ್ನು ಪ್ರೀತಿಸಲು ಪ್ರಾರಂಭಿಸಿದರು. ಆದರೆ ಮಾಲತಿಯಲ್ಲಿ ಈಗ ಮೊದಲಿನ ಯಾವ ಸ್ವಭಾವವೂ ಕಾಣುವುದಿಲ್ಲ. ಮೆಹತಾ ಅವರ ಭಾವನೆಗಳೂ ಅವಳಿಗೆ ತಿಳಿಯುತ್ತಿರಲಿಲ್ಲ. ಈಗ ಅವಳ ಗುರಿಯೆಲ್ಲಾ ಒಂದೇ. ಅದು ಬಡವರ ಸೇವೆ ಮಾಡುವುದು, ನಿಸ್ವಾರ್ಥ ಬದುಕು ಸಾಗಿಸುವುದು ಮತ್ತು ತನ್ನ ತನವನ್ನು ಉಳಿಸಿಕೊಳ್ಳುವುದೇ ಆಗಿತ್ತು. ಇವರದ್ದು ಸ್ನೇಹ ಸಂಬಂಧವೂ ಹೌದು ಜೊತೆಗೆ ಅದು ಪ್ರೀತಿಗೆ ತಿರುಗಿದ ಸ್ನೇಹವೂ ಹೌದು.

ಮೆಹತಾ ಅವರು ಮಾಲತಿಯನ್ನು ನನ್ನ ಮದುವೆ ಮಾಡಿಕೊಳ್ಳಿ ಎಂದು ಕೇಳುವರು. ಅದಕ್ಕೆ ಮಾಲತಿ 'ಇಲ್ಲಿ' ನಾವು ದಂಪತಿಗಳು ಆಗುವುದಕ್ಕಿಂತ ಸ್ನೇಹತರು ಆಗಿರುವುದು ಒಳ್ಳೆಯದು' ಎನ್ನುವಳು. ಈ ಮಾತಿನಲ್ಲಿ ಅವಳ ಮೊದಲಿನ ಸ್ವಭಾವಗಳು ಮಾಯವಾಗಿ ಈಗ ಹೊಸ ಜೀವನದ ಆದರ್ಶದ ಬದುಕನ್ನು ಬಯಸುವಂತೆ ಕಾಣುತ್ತಿದೆ.

ಈ ಇಬ್ಬರ ಸಂಬಂಧವು ಸಹಜವಾದ ಮೌಲ್ಯಗಳನ್ನು ಪ್ರಕಟಿಸುವುದರ ಜೊತೆಗೆ ಸ್ನೇಹದ ಮಹತ್ವ ಹಾಗೂ ನಿಸ್ವಾರ್ಥದ ಬದುಕು ಹೇಗಿರುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇಲ್ಲಿ ಕೇವಲ ನೈತಿಕ, ಅನೈತಿಕ ಸಂಬಂಧಗಳು (ಹೊರತುಪಡಿಸಿ) ಮಾತ್ರ ಇರದೆ ಇಲ್ಲಿ ತಂದೆ ಮಗನ ಸಂಬಂಧ, ತಾಯಿ ಮಕ್ಕಳ ಸಂಬಂಧ, ಅಣ್ಣ ತಂಗಿಯ ಸಂಬಂಧ, ಸ್ನೇಹಿತರ ಸಂಬಂಧ ಹೀಗೆ ಅನೇಕ ಸಂಬಂಧಗಳ ಸಂಕೀರ್ಣ ವಿನ್ಯಾಸವನ್ನು ಕಾಣಬಹುದು.

ಗೋಬರನು ಜುನಿಯಾಳೊಂದಿಗೆ ಲಖ್ನೋಗೆ ಹೋಗುವನು. ನಂತರ ಧನಿಯಾಳು ಮಗನಾದ ಗೋಬರನಿಲ್ಲದೆ, ಸೊಸೆಯಾದ ಜುನಿಯಾಳಿಲ್ಲದೆ, ಅದಕ್ಕಿಂತ ಹೆಚ್ಚಾಗಿ ತನ್ನ ಮೊಮ್ಮಗು ಇಲ್ಲದೆ ಪಡುವ ವೇದನೆಯನ್ನು ಕಾದಂಬರಿಯು ಬಹಳ ಸೂಕ್ಷ್ಮವಾಗಿ ನಿರೂಪಿಸಿದೆ.

ತನ್ನ ತಮ್ಮಂದಿರು ಎಷ್ಟೆ ನೋವು, ತೊಂದರೆ ಮಾಡಿದರೂ ತನ್ನ ತಮ್ಮಂದಿರನ್ನು ಕ್ಷಮಿಸುವ ಸಮಾಧಾನದ ಮತ್ತು ಅಂತಃಕರಣದ ವ್ಯಕ್ತಿಯಾಗಿದ್ದನು. ತಮ್ಮನು ದಂಡ ಕಟ್ಟಬೇಕಾಗಿ ಬಂದಾಗ ಅವನ್ನು ಅದರಿಂದ ಉಳಿಸಲು

ಪ್ರಯತ್ನಿಸುವನು. ತಮ್ಮನು ಯಾವುದೋ ಊರಿಗೆ ಹೋದಾಗ, ನಂತರ ಆತನ ಹೆಂಡತಿಯ ಪಾಲಿನ ಹೊಲಗಳನ್ನು ಉಳುವ ಜವಾಬ್ದಾರಿಯನ್ನು ಹೊರುವನು.

ಜುನಿಯಾಳು ತನ್ನ ಮಗುವನ್ನು ಕಳೆದುಕೊಂಡು ಅನುಭವಿಸುವ ಯಾತನೆ, ಬಡತನದಲ್ಲೂ ತಾಯಿ ಮಕ್ಕಳನ್ನು ಅಕ್ಕರೆಯಿಂದ ಕಾಣುವುದು, ಸಿಲಿಯಾಳ ಮಗು ತೀರಿಹೋದಾಗ ಪಡುವ ಸಂಕಟ ಹಾಗೂ ನೋವು, ಅದೇ ರೀತಿ ಸ್ನೇಹದ ಸಂಬಂಧಗಳನ್ನು ಸಹ ಇಲ್ಲಿ ಕಾಣಬಹುದು. ಸಿಲಿಯಾ ಹಾಗೂ ಸೋನಳ ಸ್ನೇಹ ಸಂಬಂಧ, ಹೋರಿಯ ಮತ್ತು ಸಿಲಿಯಾಳ ಸಂಬಂಧ ಇವುಗಳನ್ನು ಇದಕ್ಕೆ ಪೂರಕವಾಗಿ ಗ್ರಹಿಸಬಹುದು.

**ಕೊನೆ ಟಿಪ್ಪಣಿ**

೧. ಪುಟ ೧೦

೨. ಪುಟ ೧೪೬ ೧೪೭

೩. ಪುಟ ೧೪೬ ೧೪೭

೪. ಪುಟ ೨೭೨ ೨೭೩

೫. ಪುಟ ೨೬೫ ೨೬೬

೬. ಪುಟ ೨೬೫, ೨೬೬

೭. ಪುಟ ೨೩೩, ೨೩೪

೮. ಪುಟ ೨೩೨, ೨೩೪

೯. ಪುಟ ೨೪೮

೧೦. ಪುಟ ೨೫೯

೧೧. ಪುಟ ೩೩೦

## ಅಧ್ಯಾಯ ೪

## ಗೋದಾನ ಕಾದಂಬರಿಯಲ್ಲಿ ರೈತಾಪಿ ಬದುಕಿನ ವಿನ್ಯಾಸಗಳು

ಗೋದಾನ ಕಾದಂಬರಿಯಲ್ಲಿ ಬರುವ ಪ್ರಮುಖ ವಿಚಾರವೇ ರೈತರ ಜೀವನ ಹಾಗೂ ಅವರ ಬದುಕಿನ ನಾನಾ ಸ್ತರಗಳ, ವಿಭಿನ್ನ ಆಯಾಮಗಳ ಸಂಕೀರ್ಣ ಚಿತ್ರಣವಾಗಿದೆ. ಈ ಕಾದಂಬರಿಯಲ್ಲಿ ರೈತನ ಪರಿಸ್ಥಿತಿಗಳು ಹಾಗೂ ಅವನು ನಿಬಾಯಿಸುವ ಸಮಸ್ಯೆಗಳನ್ನು ಚಿತ್ರಿಸಲಾಗಿದೆ.

ಗೋದಾನ ಕಾದಂಬರಿಯಲ್ಲಿಯೂ ಸಹ ರೈತನ ಬದುಕಿನ ವಿನ್ಯಾಸಗಳನ್ನು ಹೊಂದಿದ್ದು ಜೀವನದ ಗಾಡಿಯನ್ನು ಎಳೆಯುವವನಾಗಿ ಕೊನೆಯವರೆಗೂ ಪ್ರಮುಖನಾಗಿ ಕಾಣಿಸಿಕೊಳ್ಳುವನು.

ಹೋರಿರಾಮ ಈ ಕಾದಂಬರಿಯಲ್ಲಿ ಬರುವ ರೈತ ಹಾಗೂ ಪ್ರಮುಖ ಪಾತ್ರವೆಂತಲೂ ಹೇಳಬಹುದು. ಈತನ ವೃತ್ತಿ ವ್ಯವಸಾಯ. ಈತನ ಕುಟುಂಬದಲ್ಲಿ ಈತನ ಹೆಂಡತಿ ಧನಿಯಾ, ಮಗ ಗೋಬರ, ಮಗಳು ಸೊನಿಯಾ ಹಾಗೂ ರೂಪ ಇವರೂ ಸಹ ವ್ಯವಸಾಯವನ್ನೆ ಅವಲಂಬಿಸಿದವರು. ಹಾಗೂ ಅದರಲ್ಲಿಯೆ ದುಡಿಯುವ ಜನ. ಹೋರಿರಾಮನಿಗೆ ವ್ಯವಸಾಯದ ಮೇಲೆ ತುಂಬ ಗೌರವ, ಅಭಿಮಾನವಿತ್ತು. ಈತನು ಐದು ಎಕರೆ ಭೂಮಿ ಹಾಗೂ ಮನೆ, ಎರಡು ಎತ್ತುಗಳನ್ನು ಸಹ ಹೊಂದಿದ್ದಾನೆ. ಈತನು ಹಳ್ಳಿಯಲ್ಲಿ ಸಮಾನವಾಗಿ ದುಡಿಯುವ ಹಾಗೂ ಬದುಕುವುದನ್ನು ತಿಳಿದವನು. ವ್ಯವಸಾಯವನ್ನು ಉತ್ತಮ ರೀತಿಯಲ್ಲಿ ಮಾಡುತ್ತಾ ಕಾಳು ಕಡಿಯನ್ನು ಬೆಳೆಯುವಂತಹದ್ದನ್ನು ಇಲ್ಲಿ ಕಾಣಬಹುದು. ರೈತನು ಮಳೆ ಹನಿ ಬೀಳುವುದನ್ನೇ ಕಾಯುತ್ತಿರುವನು. ನಂತರ ಅದರಲ್ಲಿ ಶ್ರಮದ ಬೀಜ ಬಿತ್ತಿ ಫಸಲು ಪಡೆಯುವ ತವಕದಲ್ಲಿ ಕಾಯುವನು.

ರೈತನಿಗೆ ಉಳುವುದು, ಬೆಳೆ ಬೆಳೆಯುವುದು ತನ್ನ ಹೊಟ್ಟೆಗೆ ಸಾಲದೆ ಹೋದರೆ ಸಾಲ ಮಾಡಿಯಾದರೂ ಜೀವನ ಸಾಗಿಸುವುದು ಅವನ ವಸ್ತುಸ್ಥಿತಿಯಾಗಿರುವುದನ್ನು ಕಾಣುತ್ತೇವೆ. ರೈತರ ಈ ಶ್ರಮ ಶ್ರೀಮಂತರ ಪಾಲಿಗೆ ಗೇಣಿ ರೂಪದಲ್ಲಿ ಹರಿದು ಹೋಗುತ್ತದೆ. ಒಡೆಯರಾದ ರಾಯಸಾಹೇಬನು ಹೋರಿರಾಮನ ಹಳ್ಳಿಯ ಜನರಿಗೆಲ್ಲಾ ಗೇಣಿ ಕೊಡಲು ತಿಳಿಸುವನು. ಆಗ ರೈತರು ಪಡುವ ಕಷ್ಟ ನಷ್ಟಗಳಲ್ಲಿ ಬೀಳುವರು. ವರ್ಷಪೂರ್ತಿ ಶ್ರಮವಹಿಸಿ ತಮ್ಮ ಗದ್ದೆ ಹೊಲದಲ್ಲಿ ದುಡಿದು ತಮ್ಮ ಹೆಂಡತಿ, ಮಕ್ಕಳ ಶ್ರಮದಿಂದ ಬೆಳೆ ತೆಗೆದು ಕೊನೆಗೆ ಅವರ ಹೊಟ್ಟೆಗೆ ಅನ್ನ ಹಾಕದೇ ಶ್ರೀಮಂತರ ಸುಖಕ್ಕೆ ಸುರಿಯುವ ಕಾರ್ಯ ನಡೆಯುತ್ತದೆ.

ಶ್ರಮ ಬಡವರದ್ದು, ಲಾಭ ರಾಯಸಾಹೇಬರದು. ರೈತರು ನೆಮ್ಮದಿ ಬದುಕನ್ನು ಸಾಗಿಸಲು ಸಾಧ್ಯವೇ ಇಲ್ಲ. ಸಾಲಗಾರನಿಗೆ ಬಡ್ಡಿ ಕಟ್ಟಲು, ಬೀಜ ಗೊಬ್ಬರದ ಬಾಕಿ ತೀರಿಸಲು ಹಾಗೂ ವರ್ಷದ ಗೇಣಿಯನ್ನು ಕಟ್ಟುವುದರಲ್ಲೆ ರೈತರು ನಿಟ್ಟುಸಿರು ಬಿಡುವರು. ದುಡಿದ ಎಲ್ಲವನ್ನು ಹಂಚಿ ಕೊನೆಗೆ ರೈತರು ತಮ್ಮ ಹೊಟ್ಟೆಯನ್ನು ಬರಿದು

ಮಾಡಿಕೊಂಡು ಹಸಿವಿನಲ್ಲಿಯೇ ಜೀವನವನ್ನು ಸವೆಸಿ ಸವೆಸಿ ಕೊನೆಯುಸಿರು ಎಳೆಯುವ ದಾರುಣ ಜೀವನದ ದುಃಸ್ಥಿತಿ ಇಲ್ಲಿ ಶಕ್ತಿಶಾಲಿಯಾಗಿ ನಿರೂಪಿಸಲ್ಪಟ್ಟಿದೆ.

ಹೋರಿರಾಮನಿಗೆ ಒಂದು ಹಸುವನ್ನು ತೆಗೆದುಕೊಳ್ಳುವ ಮತ್ತು ಅದನ್ನು ತನ್ನ ಮನೆಯಲ್ಲಿ ಕಟ್ಟುವ ಬಹಳ ದೊಡ್ಡ ಕನಸಿತ್ತು. ಹೋರಿಯ ಈ ಆಸೆಯು, ೧೯೩೩ರಲ್ಲಿ ಪ್ರಕಟವಾದ ಶಿವರಾಮ ಕಾರಂತ ಅವರ 'ಚೋಮನ ದುಡಿ'ಯ ಚೋಮನು ತಾನು ಗೇಣಿ ಭೂಮಿ ಮಾಡಬೇಕು ಎಂದು ಆಸೆಪಟ್ಟ ಸ್ಥಿತಿಯನ್ನು ನಮ್ಮ ಕಣ್ಣ ಮುಂದೆ ತರುತ್ತದೆ. ಈ ಎರಡೂ ಕಡೆಗಳಲ್ಲಿ ಗುರುತಿಸಬಹುದಾದ ಬಹಳ ಮುಖ್ಯವಾದ ಒಂದು ಸಾಮಾನ್ಯ ಅಂಶವೆಂದರೆ ಅದು ಸ್ವಾವಲಂಬಿ ಬದುಕಿನ ತೀವ್ರವಾದ ಅಪೇಕ್ಷೆ. ಈ ಬಗೆಯ ಅಪೇಕ್ಷೆ ಹೋರಿಗಾಗಲಿ ಅಥವಾ ಚೋಮನಿಗಾಗಲಿ ಯಾಕೆ ಬರುತ್ತದೆ ಎಂದರೆ, ಅವರ ಸ್ವಾವಲಂಬಿ ಬದುಕನ್ನು ಹತ್ತಿಕ್ಕಲಾಗಿರುತ್ತದೆ ಇಲ್ಲವೆ ಅದನ್ನು ಕಟ್ಟಿಕೊಳ್ಳಲು ಬೇಕಾದ ಅವಕಾಶ ಮತ್ತು ಸೌಲಭ್ಯಗಳನ್ನು ಬಲಾತ್ಕಾರದಿಂದ ಕಿತ್ತುಕೊಳ್ಳಲಾಗಿರುತ್ತದೆ. ವಿಚಿತ್ರವೆಂದರೆ ಈ ಯಜಮಾನಿಕೆಯ ಹಾಗೂ ದಬ್ಬಾಳಿಕೆಯ ವಿರುದ್ಧವೇ ಸೆಣಸಾಟ ಶುರುವಾಗುತ್ತದೆ. ಚೋಮ ಮತ್ತು ಹೋರಿಯ ಮುಂದಿನ ಬದುಕು ಬೇರೆಬೇರೆಯಾಗಿ ಸಾಗುತ್ತದೆ. ಇಲ್ಲಿ ಅದರ ವಿವರದ ಹಾಗೂ ಚರ್ಚೆಯ ಅಗತ್ಯವಿಲ್ಲ.

ಕಾಲ ಕಾಲಕ್ಕೆ ಸರಿಯಾಗಿ ಮಳೆ ಬಂದರೆ ಅದರಿಂದ ಬೆಳೆ ಚನ್ನಾಗಿ ಸಿಕ್ಕರೆ ರೈತನ ಆಸೆ, ಆಕಾಂಕ್ಷೆಗಳು ಹಾಗೂ ತಾನು ಬಯಸಿದಂತೆ ಹಸುವನ್ನು ಕೊಂಡುಕೊಳ್ಳಬಹುದು. ಅದರಿಂದ ಎತ್ತುಗಳನ್ನು ಕೊಂಡು, ಎತ್ತುಗಳಿಂದ ಬೇಸಾಯ ಮಾಡಿ, ಒಳ್ಳೆಯ ಫಸಲನ್ನು ಗಳಿಸಬಹುದು ಹಾಗೂ ಗೇಣಿಯನ್ನೂ ಕಟ್ಟಬಹುದು.

ಇಲ್ಲಿ ಮಳೆ ಬಂದರೆ ಗೇಣಿ ವಸೂಲಿ ಮಾಡುವ ಶ್ರೀಮಂತರ ಕಾಟ. ಮಳೆ ಬರದೇ ಇದ್ದರೂ ಸಾಲದ ಬಾಧೆ ಹಾಗೂ ದನ ಕರುಗಳ ಸಂಕಟ. ತಮ್ಮ ಹೊಟ್ಟೆಯ ಪಾಡು ಕಷ್ಟವಾಗುತ್ತದೆ. ಇಲ್ಲಿ ರೈತನಿಗೆ ಜನರಿಂದ ಅಲ್ಲದೆ ಎಲ್ಲಾ ರೀತಿಯಿಂದಲೂ ಶೋಷಣೆ ತಪ್ಪಿದ್ದಲ್ಲ. ಹೋರಿರಾಮ ಭೋಲಾನ ಹಸುವನ್ನು ನೋಡಿ ಕೊಂಡುಕೊಳ್ಳುವ ಬಯಕೆ ಬಂದರೂ ಅವನಲ್ಲಿ ಹಣವಿರಲಿಲ್ಲ. ಹಸುವನ್ನು ಸಾಲ ಮಾಡಿ ಕೊಂಡರೂ ಕೊನೆಗೆ ಅದಕ್ಕೆ ವಿಷವಿಟ್ಟು ತನ್ನ ಸ್ವಂತ ತಮ್ಮನೇ ಸಾಯಿಸುವನು. ತನ್ನ ಸಂಬಂಧ ಹೊಂದಿದವರು ಹೋರಿರಾಮನ ಏಳಿಗೆಯನ್ನು ಹಾಗೂ ಅವನು ಸುಖವಾಗಿರುವುದನ್ನು ಸಹಿಸಿಕೊಳ್ಳುವುದಿಲ್ಲ. ಅಲ್ಲಿ ನಷ್ಟಕ್ಕೆ ಒಳಗಾಗುವನು. ಇದರಿಂದ ಗಂಡ ಹೆಂಡಿರ ನಡುವೆ ಕದನ ನಡೆಯುತ್ತದೆ. ಧನಿಯಾ ವಿರೋಧಿಸಿದರೆ ಹೋರಿ ತನ್ನ ರಕ್ತ ಸಂಬಂಧಿಯಾದ ತಮ್ಮನನ್ನು ಬಿಟ್ಟುಕೊಡದೆ ಬೆಂಬಲಿಸುವುದನ್ನು ಕಾಣುತ್ತೇವೆ. ರಕ್ತ ಸಂಬಂಧಕ್ಕೆ ಮಹತ್ವ ನೀಡುವ ಹೋರಿ, ಈ ಕಥನದಲ್ಲಿ ಮಾನವೀಯತೆಯ ಪ್ರತಿರೂಪವಾಗಿ ನಿಲ್ಲುತ್ತಾನೆ. ಬೇರೆ ರೀತಿಯಲ್ಲಿ ಹೇಳುವುದಾದರೆ ಮಾನವೀಯತೆಯು ರಕ್ತ ಸಂಬಂಧದ ಆಯಾಮದಲ್ಲಿ ಕ್ರಿಯಾಶೀಲವಾಗಿದೆ.

ರೈತಾಪಿ ಬದುಕಿನ ವಿನ್ಯಾಸವನ್ನು ಅಧ್ಯಯನದ ಅನುಕೂಲಕ್ಕಾಗಿ ಮೂರು ಹಂತದಲ್ಲಿ ವಿಂಗಡಿಸಿಕೊಳ್ಳಲಾಗಿದೆ.

೧. ಸಾಮಾಜಿಕವಾಗಿ

೨. ಆರ್ಥಿಕವಾಗಿ

೩. ರಾಜಕೀಯವಾಗಿ

**೧. ಸಾಮಾಜಿಕವಾಗಿ ರೈತನ ಬದುಕಿನ ವಿನ್ಯಾಸಗಳು**

ಗೋದಾನ ಕಾದಂಬರಿಯಲ್ಲಿ ಸಾಮಾಜಿಕವಾಗಿ ಹೋರಿರಾಮನ ಬದುಕಿನ ವಿನ್ಯಾಸವನ್ನು ಯಾವ ರೀತಿ ಕಟ್ಟಿಕೊಂಡಿದ್ದಾನೆ, ಹಾಗೂ ಸಾಮಾಜಿಕವಾಗಿ ಹೋರಿರಾಮನ ಬದುಕಿನ ವಿನ್ಯಾಸ ಯಾವ ಮಟ್ಟದಲ್ಲಿ ಇದೆ, ಯಾವ ಯಾವ ಅಂಶಗಳನ್ನು ಒಳಗೊಂಡಿದೆ ಎಂಬುದ್ದನ್ನು ಇಲ್ಲಿ ಪರಿಶೀಲಿಸಬಹುದು.

ಹೋರಿರಾಮನ ಸಾಮಾಜಿಕ ಜೀವನವು ಅಷ್ಟೇನೂ ಉತ್ತಮ ರೀತಿಯಲ್ಲಿ ಇರಲಿಲ್ಲ. ಹೋರಿರಾಮನ ಬಗ್ಗೆ ಎಲ್ಲ ರೈತರೂ ಗೌರವ, ಅಭಿಮಾನವನ್ನು ಹೊಂದಿದ್ದರು. ಅದೇ ರೀತಿ ಹೋರಿರಾಮನು ಎಲ್ಲರಲ್ಲೂ ಪ್ರೀತಿ, ಗೌರವಗಳಿಂದ ನಡೆದುಕೊಳ್ಳುತ್ತಿದ್ದನು.

ಬೆಲೋರಿಯಲ್ಲಿ ವಾಸಿಸುವ ಎಲ್ಲಾ ರೈತಾಪಿ ವರ್ಗ ಸಾಮಾಜಿಕವಾಗಿ ಹಿನ್ನಡೆಯನ್ನು ಅನುಭವಿಸುತ್ತಿದ್ದರು. ಎಲ್ಲಾ ರೈತರೂ ಬದುಕಲು ವ್ಯವಸಾಯವನ್ನು ಅವಲಂಬಿಸಿದ್ದರು. ಇವರು ಸಾಲ ಮಾಡಿ ನೋವು ಸಂಕಟಗಳನ್ನು ಉಂಡು ಜೀವನ ಸಾಗಿಸುತ್ತಿದ್ದರು. ಪ್ರತಿಯೊಬ್ಬ ರೈತನೂ ಸಾಮಾಜಿಕ ಸಂಬಂಧಗಳ ಹಾಗೂ ಅದರ ನಿಯಮಗಳ ಚೌಕಟ್ಟಿನಲ್ಲಿಯೇ ಜೀವನ ಸಾಗಿಸುತ್ತಿದ್ದರು.

ಗೋದಾನ ಕಾದಂಬರಿಯಲ್ಲಿ ಬರುವ ಬೇಲಾರಿ ಹಳ್ಳಿಯ ರೈತಾಪಿ ವರ್ಗದವರು ಶ್ರೀಮಂತರೊಂದಿಗೆ ನಿಕಟ ಸಂಬಂಧ ಹೊಂದಿದ್ದರು. ಇದು ಸ್ನೇಹ ಸಂಬಂಧ ಹಾಗೂ ಆತ್ಮೀಯ ಸಂಬಂಧ ಆಗಿರದೆ ಇದು ಕೇವಲ ಗೇಣಿದಾರರ ಹಾಗೂ ಸಾಲಗಾರರ ಹಾಗೂ ಶ್ರೀಮಂತರ ನಡುವಿನ ಸಂಬಂಧವಾಗಿತ್ತು. ಬಡವರ ಶ್ರೀಮಂತರ ಸಂಬಂಧ ಅಲ್ಲದೆ ಸಾಲ ಪಡೆದವನು ಹಾಗೂ ಶ್ರೀಮಂತರ ನಡುವಿನ ಸಂಬಂಧ ಇರುವುದು ಕಂಡುಬರುತ್ತದೆ. ಸಾಲ ಪಡೆಯುವುದಕ್ಕಾಗಿ ರೈತರು ಶ್ರೀಮಂತರನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಶ್ರೀಮಂತರು ಒಂದಕ್ಕೆ ಎರಡರಂತೆ ಅವರನ್ನು ಶೋಷಣೆ ಮಾಡುವಂತಹದ್ದು ಇಲ್ಲಿ ಕಾಣಬಹುದಾಗಿದೆ.

ರೈತರು ಸಮಾಜದ ಕಟ್ಟು ಪಾಡುಗಳಿಗೆ ಬದ್ದರಾಗಿ ಬದುಕಲೇ ಬೇಕಾಗಿತ್ತು. ದೊಡ್ಡವರನ್ನು ವಿರೋಧಿಸುವಂತಿಲ್ಲ. ಅವರ ಆಜ್ಞೆಗಳನ್ನು ಮೀರುವಂತಿಲ್ಲ. ಕೇಳಿದಾಗ ಗೇಣಿ ಕೊಡುವುದು, ಅವರು ಹೇಳಿದ ಹಾಗೆ ನಡೆದುಕೊಳ್ಳುವುದು, ಇಲ್ಲವಾದಲ್ಲಿ ರೈತರು ಬದುಕನ್ನು ಸಾಗಿಸುವುದು ತುಂಬ ಕಷ್ಟದ ಕೆಲಸವಾಗಿತ್ತು.

ಹೋರಿರಾಮ, ರಾಯಸಾಹೇಬರ ಹತ್ತಿರ ಸ್ನೇಹದಿಂದ ನಡೆದುಕೊಂಡರೂ ಹೋರಿರಾಮನ ಗೇಣಿಯ ಹಣದಲ್ಲಿ ಯಾವುದೇ ರಿಯಾಯಿತಿ ನೀಡುತ್ತಿರಲಿಲ್ಲ. ಹಾಗಾಗಿ ಕೇವಲ ವ್ಯಾಪಾರದ ಹಿತದೃಷ್ಟಿಯಲ್ಲಿ ಈ ಸಂಬಂಧಗಳು ರೂಪುಗೊಂಡಿರುವುದು ಇಲ್ಲಿ ಕಾಣುತ್ತದೆ. ರೈತನ ಶ್ರಮದ ಬೆವರಿನಲ್ಲಿ ಸುಖಿಸುವ ವ್ಯಕ್ತಿಗಳಿಗೆ ಬಡವರ ಹಸಿವಿನ ಪರಿಸ್ಥಿತಿಯ ಅರಿವು ಅವರಲ್ಲಿ ಇರುವುದಿಲ್ಲ. ರೈತರ ಮೇಲೆ ಆಜ್ಞೆಗಳನ್ನು ಹೊರಡಿಸುವುದನ್ನು ಕಾಣಬಹುದು. ರಾಯಸಾಹೇಬರು ಜ್ಯೇಷ್ಠಮಾಸದ ದಸರೆಯ ಸಂದರ್ಭದಲ್ಲಿ ನಡೆಯುವ ಧನುರ್ಯಜ್ಞ ಮಹೋತ್ಸವಕ್ಕೆ ಹಳ್ಳಿಯ ರೈತರಿಂದ ಹಣ ವಸೂಲಿ ಮಾಡುವರು. ಶ್ರೀಮಂತರ ಮೋಜಿಗೆ ಬಡವರು ಹಸಿದುಕೊಂಡು ತಮ್ಮ ಹೊಟ್ಟೆಗೆ ಇಲ್ಲದಿದ್ದರೂ ಹಣ ಮಾತ್ರ ನೀಡಲೇಬೇಕೆಂಬ ಈ ಸಾಮಾಜಿಕ ಸಂಬಂಧವೇ ಇಲ್ಲಿಯ ನೀತಿಯಾಗಿರುವುದು ಕಂಡುಬರುತ್ತದೆ.

ಕೂಲಿಗಳು ಎಂದರೆ ಶ್ರೀಮಂತರು ಹಾಕಿದ ತಾಳಕ್ಕೆ ಕುಣಿಯಬೇಕು. ಪುಕ್ಕಟೆಯಾಗಿ ಕೆಲಸ ಕಾರ್ಯಗಳನ್ನು ಮಾಡಬೇಕು. ವಿರೋಧಿಸುವಂತಿಲ್ಲ. ಒಂದು ವೇಳೆ ಹಸಿವಾಗಿದ್ದರೂ ಹೇಳದೇ ಕೆಲಸ ಮುಗಿಸಬೇಕು. ಇಲ್ಲವಾದರೆ ಅವರು ಶ್ರೀಮಂತರ ಕೋಪಕ್ಕೆ ತುತ್ತಾಗಬೇಕು. ಹೀಗೆ ಶ್ರೀಮಂತರು, ಉಳ್ಳವರು ಮಾಡಿದ ನೀತಿಯಲ್ಲಿ ಬಡವರ ಬದುಕು ಸಾಗುವಂತಹದ್ದು. ಇಲ್ಲವಾದರೆ ಅವರು ಬದುಕಿನಲ್ಲಿ ನೆಮ್ಮದಿ ಇಲ್ಲದೆ, ಸಂತೋಷವಿಲ್ಲದೆ ಹಗಲು ಇರುಳು ದುಡಿದರೂ ಊಟಕ್ಕೆ ಸಿಗದೆ ತೊಂದರೆಗೆ ಬೀಳಬೇಕಾಗುತ್ತದೆ.

ಹೋರಿರಾಮ ಕಷ್ಟಪಟ್ಟು ವ್ಯವಸಾಯ ಮಾಡಿದರೂ ಅಲ್ಲಿ ಸಾಲ ಕೊಟ್ಟಿರುವವರು ತಮ್ಮ ಪಾಲನ್ನು ಕಿತ್ತುಕೊಳ್ಳುವರು. ನಂತರ ಜಮೀನ್ದಾರ ತನ್ನ ಪಾಲು ತೆಗೆದುಕೊಂಡು ಕೊನೆಗೆ ಎಲ್ಲಾ ಹೋಗಿ ಹೋರಿರಾಮನಿಗೆ ಐದು ಸೇರು ಧಾನ್ಯ ಉಳಿಯುತ್ತದೆ. ಇಲ್ಲಿ ಕಷ್ಟ ಪಟ್ಟವನು ಬೇರೆಯವರು. ತೆಗೆದುಕೊಳ್ಳುವವರು ಶ್ರೀಮಂತರು. ಹೀಗೆ ಹೋರಿರಾಮ್, ಸಮಾಜದ ಈ ರೀತಿಯ ನಿಬಂಧನೆ ಹಾಗೂ ಪರಿಸ್ಥಿತಿಗೆ ಒಳಗಾಗುವನು[೧]. ಹೋರಿ ನೋವಿನಿಂದ 'ನಾವು ಹುಟ್ಟಿರುವುದೇ ನಮ್ಮ ರಕ್ತ ಹರಿಸಿ ದೊಡ್ಡವರ ಮನೆ ತುಂಬುವುದಕ್ಕೆ'[೨] ಎಂದೂ ನುಡಿವನು. ತನ್ನ ಸ್ನೇಹಿತನಾದ ಭೋಲಾನ ಹತ್ತಿರ ಮಾತು ಕತೆಯಲ್ಲಿ ತನ್ನ ನೋವನ್ನು ಹಂಚಿಕೊಳ್ಳುವನು.

ರೈತರಲ್ಲಿ ಪರಸ್ಪರ ಒಗ್ಗಟ್ಟು ಅನ್ನುವುದು ಇರಲಿಲ್ಲ. ರೈತ, ರೈತರನ್ನು ಕಂಡರೆ ಸಂಕಟ ಹಾಗೂ ಒಬ್ಬನನ್ನು ಕಂಡರೆ ಮತ್ತೊಬ್ಬನಿಗೆ ಆಗುತ್ತಿರಲಿಲ್ಲ. ಹೀಗಾಗಿ ಎಲ್ಲ ರೈತರು ನೋವಿನ ಜೀವನವನ್ನು ಸಾಗಿಸುವ ದುರಂತವನ್ನು ಇಲ್ಲಿ ಗಮನಿಸಬಹುದು.

ಯಾರಲ್ಲಿ ಹಣವಿದೆಯೋ, ಅಧಿಕಾರವಿದೆಯೋ, ಬಲವಿದೆಯೋ, ವಿದ್ಯೆ ಇದೆಯೋ ಅವರೇ ಮನುಷ್ಯರು. ಅವರು ಮಾತ್ರ ಬದುಕುವ ಅಧಿಕಾರವನ್ನು ಹಾಗೂ ಸುಖಪಡುವ ಅಧಿಕಾರವನ್ನು ಹೊಂದಿದ್ದಾರೆ ಎಂಬುದನ್ನು ಹೋರಿರಾಮ ಹೇಳುವನು.

ಇದು ಒಂದು ಕಡೆ ಹೋರಿರಾಮನ ವೈಯಕ್ತಿಕ ಅನುಭವವೂ ಹೌದು; ಜೊತೆಗೆ ಮತ್ತೊಂದು ಕಡೆ ರೈತರ ಸಾಮಾಜಿಕ ವಸ್ತುಸ್ಥಿತಿಯೂ ಹೌದು.

ಕಾದಂಬರಿಯಲ್ಲಿ ಹೋರಿರಾಮನ ಸಾಮಾಜಿಕ ಸಂಬಂಧದ ವ್ಯವಸ್ಥೆ ಹಾಗೂ ಲೇವಾದೇವಿಯವರ ನಡುವಿನ ಸಂಬಂಧ ಕೂಡ ಒಂದು ಪ್ರಮುಖ ಅಂಶವಾಗಿದೆ. ಹೋರಿರಾಮ ಹಾಗೂ ಹಳ್ಳಿಯ ರೈತರೆಲ್ಲ ತಮ್ಮ ಹಳ್ಳಿಯ ಶ್ರೀಮಂತರಾದ ಲೇವಾದೇವಿಯ ವ್ಯಾಪಾರ ಮಾಡುವ ಪಂಡಿತ ದಾತಾದೀನ, ಮಂಗರೂ ಸಾವುಕಾರ, ದುಲಾರಿ (ವಿಧವೆ), ಝಿಂಗುರ ಹೀಗೆ ಇನ್ನೂ ಮುಂತಾದವರ ಕಪಿಮುಷ್ಠಿಯಲ್ಲಿ ಬದುಕುವರು. ಇವರು ತಮ್ಮ ಬದುಕನ್ನು ಜೀತದ ಎತ್ತುಗಳಂತೆ, ಗಾಣದ ಎತ್ತುಗಳಂತೆ ಸವೆಸುವರು. ಶ್ರಮ ಮತ್ತು ಬೆವರು ಮಾತ್ರ ರೈತಾಪಿ ವರ್ಗದ್ದು; ಲಾಭ ಮತ್ತು ಸುಖ ಮಾತ್ರ ಶ್ರೀಮಂತರದ್ದು.

ಒಂದು ಕಡೆ ಬಡತನದಲ್ಲಿ ಕಿತ್ತು ತಿನ್ನುವ ರೈತರನ್ನು ಶೋಷಣೆ ಮಾಡುವರು. ಮತ್ತೊಂದು ಕಡೆ ರಾಯಸಾಹೇಬರ ಆಜ್ಞೆಯನ್ನು ಪಾಲಿಸಲು ಹೊಲಗದ್ದೆಗಳನ್ನು ಉಳುಮೆ ಮಾಡಲು ಸಾಲ ಮಾಡುವರು. ಆ ಸಾಲಕ್ಕೆ ಬಡ್ಡಿ ಬರೆದು ಬಡ್ಡಿ ಕಟ್ಟುವುದರಲ್ಲಿಯೇ ರೈತರು ಸೋತು ಹೋಗುವರು. ಆದರೆ ಅಸಲು ಮಾತ್ರ ಬೆಟ್ಟದಂತೆ ಎದುರಾಗಿ ಕೊನೆಗೆ ಮನೆ ಮಠಗಳನ್ನು ಕಳೆದುಕೊಂಡು ಬೀದಿಗೆ ಬೀಳುವರು. ತಮ್ಮ ನೋವನ್ನು ತಡೆದುಕೊಳ್ಳಲಾಗದೆ ಪ್ರಾಣ ಬಿಡುವಂತೆ ಶ್ರೀಮಂತರು ಒಂದು ರೂಪಾಯಿಗೆ ಒಂದು ಆಣೆ ಬಡ್ಡಿಯಂತೆ ಬಡವರ ರಕ್ತವನ್ನು ಹೀರುವರು.

ಹೋರಿ ರಾಮನೊಂದಿಗೆ ಜಾತಿಯ ಹಿನ್ನೆಲೆಯಲ್ಲಿ ಸಹಾಯ ಹಾಗೂ ಸಹಾನುಭೂತಿಯ ಮಾತುಗಳು ಶ್ರೀಮಂತರಿಂದ ಬರುವುವು. ಅವು ಕೇವಲ ಸಮಾಧಾನದ ಮಾತುಗಳಾಗಿದ್ದವೇ ಹೊರತು ಸಾಲದಲ್ಲಿ ಹಾಗೂ ಗೇಣಿಯಲ್ಲಿ ಮಾತ್ರ ಯಾವುದೇ ರಿಯಾಯಿತಿ ಸಿಗುತ್ತಿರಲಿಲ್ಲ. ಹೋರಿರಾಮನೊಂದಿಗೆ ಈ ರೀತಿಯ ಸಂಬಂಧಗಳು ತುಂಬಾನೇ ಇದ್ದರೂ ಹೋರಿಗೆ ಯಾವತ್ತು ಲಾಭ ಹಾಗೂ ನೆಮ್ಮದಿ ಸಿಕ್ಕಿಲ್ಲ. ಅದು ಕೇವಲ ಶೋಷಣೆಯ ಇನ್ನೊಂದು ಮುಖದಂತೆ ಹೋರಿಗೆ ಭಾಸವಾಗುತ್ತಿತ್ತು.

ಗೋದಾನ ಕಾದಂಬರಿಯಲ್ಲಿ ಶ್ರೀಮಂತರು ಮಾಡಿದ ಅನಾಚಾರಗಳಿಗೆ ಯಾವುದೇ ದಂಡ ಅವಮಾನಗಳು ಇಲ್ಲ. ಅದೇ ಬಡವರು ಮಾಡದೇ ಇರುವ ತಪ್ಪಿಗೂ ಅವರು ದಂಡ ಕಟ್ಟಬೇಕು. ಬಡತನದಲ್ಲಿ ಇದ್ದರೂ ಅವರು ಪಂಚರು ಹೇಳಿದಂತೆ ಕೇಳಲೇಬೇಕಾಗಿ ಬರುತ್ತದೆ.

ರೈತರನಲ್ಲದೆ ಹೆಣ್ಣು ಮಕ್ಕಳನ್ನೂ ಶ್ರೀಮಂತರು ತಮ್ಮ ಅನುಕೂಲ ಹಾಗೂ ತಮ್ಮ ಸುಖಕ್ಕೆ ಬಳಸಿಕೊಳ್ಳುವುದನ್ನು ಇಲ್ಲಿ ಕಾಣಬಹುದು. ದಾತಾದೀನನ ಮಗ ಮಾತಾದೀನನು ಚಮ್ಮಾರ ಹುಡುಗಿ ಸಿಲಿಯಾಳೊಂದಿಗೆ ಸಂಬಂಧ ಹೊಂದಿದ್ದ. ಅವಳನ್ನು ಜಾತಿಹೀನಳಂತೆ ಕಾಣುವನು. ಅವಳನ್ನು ಗೌರವಿಸದೆ, ಅವಳಿಗೆ ಯಾವ

ಸಹಜವಾದ ಅವಕಾಶವನ್ನೂ ನೀಡದೆ ಇರುವುದು ಇಲ್ಲಿ ನಿರೂಪಿತವಾಗಿದೆ. ಇದು ಶ್ರೀಮಂತರ ದರ್ಪದ ಹಾಗೂ ದೌರ್ಜನ್ಯದ ಚಿತ್ರಣವಾಗಿದೆ. ಇದು ಶ್ರೀಮಂತರ ಅಧಿಕಾರ, ದರ್ಪದ ಒಂದು ಆಯಾಮವಾಗಿದೆ. ಇದೇ ರೀತಿ ಬಡವರು ಮಾಡಿದರೆ ಅದಕ್ಕೆ ದಂಡ, ಬಹಿಷ್ಕಾರ ಹಾಗೂ ಅವಮಾನವನ್ನು ಮಾಡುವರು. ಶ್ರೀಮಂತರು ತಾವು ಮಾಡುವ ಶೋಷಣೆಯನ್ನು ಧರ್ಮದ ಹೆಸರಿನಲ್ಲಿ ಹಾಗೂ ನ್ಯಾಯ ನೀತಿಯ ಹೆಸರಿನಲ್ಲಿ ಮುಂದುವರಿಸುವುದು ಇಲ್ಲಿ ನಿರೂಪಿತವಾಗಿದೆ.

ಇಲ್ಲಿ ಶ್ರೀಮಂತರಿಗೆ ಯಾವುದೇ ನೈತಿಕತೆ ಹಾಗೂ ಧರ್ಮದ ಕಟ್ಟು ಪಾಡುಗಳಿಲ್ಲ. ಬಡವರು ಹಾಗೂ ರೈತರು ತಾವು ತಮ್ಮ ಯಾವುದೇ ನೀತಿಯನ್ನು, ಚೌಕಟ್ಟನ್ನು ಮೀರುವಂತಿಲ್ಲ. ಹಾಗೂ ಶ್ರೀಮಂತರು ಬಡವರ ಬದುಕಿನೊಂದಿಗೆ ತಮಗೆ ಇಷ್ಟ ಬಂದಹಾಗೆ ವರ್ತಿಸಬಹುದು. ಅದಕ್ಕೆ ಬಡವರ ಯಾವುದೇ ಪ್ರತಿಕ್ರಿಯೆ ಮತ್ತು ವಿರೋಧ ಇರಬಾರದು. ಸಿಲಿಯಾ ಪ್ರೀತಿ ಎಂಬ ಭ್ರಮೆಯಲ್ಲಿ ಸಿಲುಕಿಕೊಂಡು ಬೀದಿಗೆ ಬೀಳುವಂತಹ ಸ್ಥಿತಿಯನ್ನು ಶ್ರೀಮಂತರು ನಿರ್ಮಾಣ ಮಾಡುವರು. ಅವಳು ವಿರೋಧಿಸದೆ, ಆತ್ಮ ವಿಮರ್ಶೆ ಮಾಡಿಕೊಳ್ಳದೆ ಬದುಕನ್ನು ಅವನ ನೆನಪಿನಲ್ಲೆ ನಿಭಾಯಿಸುವಳು. ಈ ರೀತಿಯ ಸಾಮಾಜಿಕ ಸ್ಥಿತಿ ರೈತಾಪಿ ವರ್ಗದ್ದಾಗಿತ್ತು.

ರೈತರು ಹಾಗೂ ಹೋರಿರಾಮ ಯಾವುದೇ ರೀತಿಯಲ್ಲಿ ಕಲ್ಪನಾ ಲೋಕದಲ್ಲಿ ವಿಹರಿಸದೆ, ಭ್ರಮೆಯಲ್ಲಿ ಮುಳುಗದೆ, ಹತಾಶೆ ಹೊಂದದೆ ಶ್ರೀಮಂತರ ಶೋಷಣೆಯಲ್ಲಿಯೆ ಬದುಕನ್ನು ತಾಳ್ಮೆಯಿಂದ ಹಾಗೂ ಶ್ರದ್ಧೆಯಿಂದ ಸಾಗಿಸುವರು.

ಹೋರಿರಾಮನು ಶೋಷಣೆಯ ಸ್ಥಿತಿಯಲ್ಲೆ ಬದುಕು ನಿಭಾಯಿಸುವುದನ್ನು ಕಾಣಬಹುದು. ತನ್ನ ಮಗನು ಗೊಲ್ಲರ ಜಾತಿಯ ಭೋಲಾನ ಮಗಳು ವಿದವೆ ಜುನಿಯಾಳನ್ನು ಮದುವೆ ಮಾಡಿಕೊಳ್ಳದೆ ಮನೆಗೆ ಕರೆತರುವನು. (ಇದರಿಂದ ಹಳ್ಳಿಯ ಪಂಚರೂ), ಅವಳು ಆಗಲೇ ಐದು ತಿಂಗಳ ಬಸುರಿಯಾಗಿದ್ದಳು. ಇಂತಹ ಪರಿಸ್ಥಿತಿಯಲ್ಲಿ ಮಾನವೀಯತೆಯನ್ನು ಹೊಂದಿದ್ದ ಹೋರಿರಾಮ ತನ್ನ ಸೊಸೆ ಎಂದು ಮನೆಗೆ ಸೇರಿಸಿದ್ದರಿಂದ ಹಳ್ಳಿಯ ಪಂಚರು ಸೇರಿ ಹೋರಿರಾಮನನ್ನು ಜಾತಿಯಿಂದ ಹೊರಗೆ ಹಾಕುವರು. ಹಾಗೂ ದಂಡ ಹಾಕುವರು. ಹಳ್ಳಿಯಲ್ಲಿ ದೊಡ್ಡ ದುರಂತವೇ ನಡೆದಿದೆ ಎಂದೂ ಜನರು ಮಾತನಾಡಿಕೊಳ್ಳುವರು.

ಹೋರಿರಾಮ ಹಾಗೂ ಧನಿಯಾ ಮಾನವೀಯತೆಯ ನಿಟ್ಟಿನಲ್ಲಿ ಒಂದು ಹೆಣ್ಣಿನ ಸ್ಥಿತಿಗತಿ ಅವಳ ಪರಿಸ್ಥಿತಿ ಹಾಗೂ ಅವಳ ಜೀವನದ ಬಗ್ಗೆ ತಿಳಿದುಕೊಂಡು ಆಶ್ರಯ ನೀಡುವರು. ಆದರೆ ಹಳ್ಳಿಯ ಶ್ರೀಮಂತರು ಇದನ್ನು ತಪ್ಪು ಎಂದು ವಾದಿಸಿ ದಂಡವನ್ನು ವಿಧಿಸುವರು. ನೂರು ರೂಪಾಯಿ ಜುಲ್ಮಾನೆ ಕಟ್ಟಲು ಹೋರಿರಾಮನು ಸಮರ್ಥನಿರಲಿಲ್ಲ. ಆದ್ದರಿಂದ ತಾನು ಬೆಳೆದ ಧಾನ್ಯವನ್ನು ಹೊತ್ತು ಪಂಚರ ಮನೆಗೆ ಹಾಕಿದನು. ಇದನ್ನು ಧನಿಯಾ ವಿರೋಧಿಸಿದರೆ ಹೋರಿರಾಮ ಧನಿಯಾಳನ್ನು ಗದರಿಸಿ 'ಅವರು ನೀಡಿದ ನ್ಯಾಯವನ್ನು ತಲೆಬಾಗಿ ಒಪ್ಪಬೇಕು. ದೇವರಿಚ್ಛೆ ನಾವು ಈ ಹಳ್ಳಿ

ಬಿಟ್ಟು ಓಡಿಹೋಗಬೇಕು ಎಂದಿದ್ದರೆ ನಾವೇನು ಓಡಬಲ್ಲೆವು'[5] ಎಂದು ಸಮಾಜದ ಕಟ್ಟುಪಾಡನ್ನು ಒಪ್ಪಿಕೊಳ್ಳುವನು. ಕೂಲಿ ಮಾಡಿದರೂ ಹೋರಿರಾಮ ಪಶ್ಚಾತ್ತಾಪ ಪಡದೆ ನಿರಾಸೆಗೊಳ್ಳದೆ ನಾನು ದುಡಿದು ಸಾಲ ತೀರಿಸುವೆ ಎಂಬ ಆತ್ಮ ಬಲದಿಂದ ಸಾಗುವನು.

ಶ್ರೀಮಂತರು ಬೇರೆ ಜಾತಿಯ ಹೆಣ್ಣನ್ನು ಮನೆಯಲ್ಲಿ ಇಟ್ಟುಕೊಂಡಿರುವುದು ತಪ್ಪಾಗುವುದಿಲ್ಲ. ಆದರೆ ಹೋರಿರಾಮನು ಮಾತ್ರ ಈ ಕೆಲಸ ಮಾಡಬಾರದು. ಸಿಲಿಯಾಳನ್ನು ಒಬ್ಬ ಕೂಲಿಯಂತೆ ಭೋಗದ ವಸ್ತುವಂತೆ ನೋಡಿ, ಕೆಲಸ ತೀರಿದ ನಂತರ ಹೊರಹಾಕುವ ಶ್ರೀಮಂತರಿಗಿಂತ ಹೋರಿರಾಮ ಮಾನವೀಯತೆಯ ಹಾಗೂ ಜುನಿಯಾಳ ಗೌರವದಿಂದ ಅವಳಿಗೋಸ್ಕರ ತನ್ನ ಎತ್ತುಗಳನ್ನು ಭೋಲಾನಿಗೆ ನೀಡುವುದನ್ನು ಕಾಣಬಹುದು. ಸಮಾಜದ ಬಗ್ಗೆ ಗೌರವವಿದ್ದರೂ ಹೆಣ್ಣಿಗೆ ನೀಡುವ ಗೌರವ ಹಾಗೂ ಕಷ್ಟಗಳಿಗೆ ಸ್ಪಂದಿಸುವ ಗುಣ ಶ್ರೀಮಂತರಲ್ಲಿ ಕಾಣುವುದಿಲ್ಲ. ಈ ವಿಷಯದಲ್ಲಿ ಶ್ರೀಮಂತರಿಗಿಂತ ದೊಡ್ಡವನಾಗಿ ಹೋರಿರಾಮನು ಕಾಣಿಸಿಕೊಳ್ಳುತ್ತಾನೆ.

ಸಮಾಜದ ಕಟ್ಟುಪಾಡುಗಳು ತಾರತಮ್ಯದಲ್ಲಿ ನಡೆಯುತ್ತವೆ. ಶ್ರೀಮಂತರಿಗೆ ಬೇರೆ ಬಡವರಿಗೆ ಬೇರೆಯಾದ ನಿಯಮಗಳನ್ನು ಹೊಂದಿದ್ದು ಶೋಷಣೆಯಲ್ಲಿ ಒಳಗಾಗುವರು. ರೈತಾಪಿ ವರ್ಗವನ್ನು ಮಾತ್ರ ಶೋಷಣೆ ಮಾಡುವರು. ಯಾವಾಗಲೂ ಸುಖ ಜೀವನದಲ್ಲಿ ಮುಳುಗಿರುವುದು, ಬಡವರು ಧರ್ಮದ ನಿಟ್ಟಿನಲ್ಲಿ ನಡೆದರೆ ಶ್ರೀಮಂತರು ಅದನ್ನು ಅನುಸರಿಸುವುದಿಲ್ಲ. ರೈತರು ಏನೇ ಮಾಡಿದರೂ ಅದು ತಪ್ಪು. ಸಮಾಜಬಾಹಿರ ಕೃತ್ಯವೆಂದು ಅವರನ್ನು ಶೋಷಣೆಗೆ ಒಳಪಡಿಸುವುದನ್ನು ಇಲ್ಲಿ ಕಾಣಬಹುದಾಗಿದೆ.

ಸಾಮಾಜಿಕ ಬದುಕಿನಲ್ಲಿ ಶ್ರೀಮಂತರನ್ನು ಯಾರೂ ವಿರೋಧಿಸುವಂತಿಲ್ಲ. ತಲೆ ಎತ್ತಿ ಮಾತನಾಡುವಂತಿಲ್ಲ. ಒಬ್ಬ ವಿಧವೆ ಮದುವೆ ಮಾಡಿಕೊಳ್ಳುವಂತೆ ಇಲ್ಲ. ಆದರೆ ಶ್ರೀಮಂತರು ಬೇರೆ ಜಾತಿಯ ಹಾಗೂ ಕೆಳಜಾತಿಯ ಹೆಣ್ಣುಮಕ್ಕಳೊಂದಿಗೆ ಸಂಬಂಧ ಇಟ್ಟುಕೊಳ್ಳಬಹುದು. ತಮ್ಮ ಅನ್ಯಾಯದ ಬಗ್ಗೆ ವಿರೋಧಿಸಿದರೆ ಮೇಲ್‌ವರ್ಗದವರು 'ನೀಚ ಜಾತಿ ಹೊಟ್ಟೆ ತುಂಬ ಕೂಳು ತಿನ್ನು ಹಾಗೂ ವಕ್ರ ರೀತಿ ಅನುಸರಿಸು, ಇದರಿಂದಾಗಿಯೇ ಶಾಸ್ತ್ರಗಳಲ್ಲಿ ಹೇಳಿದ್ದಾರೆ. ನೀಚ ಜಾತಿಯವರನ್ನು ಚೆನ್ನಾಗಿ ತುಳಿದು ಹಾಕಿ' ಎಂದು ದಾತಾದೀನ ಧನಿಯಾಳ ವಿರೋಧವನ್ನು ಖಂಡಿಸಿ ಹೇಳುವನು. ಪಂಡಿತನ ಅನಾಚಾರ ತುಂಬಾ ಇದೆ. ಆದರೆ ಇವನು ಆಚಾರ ವಿಚಾರ ಶಾಸ್ತ್ರಗಳ ಬಗ್ಗೆ ಹೇಳುವುದು ಇದು ಸಾಮಾಜಿಕ ಜೀವನದ ಒಂದು ಆಯಾಮವಾಗಿದೆ[6].

ರೈತಾಪಿ ವರ್ಗಕ್ಕೆ ಶಿಕ್ಷಣ ಹಾಗೂ ಜ್ಞಾನ ಇಲ್ಲದೆ ಇರುವುದು, ದೊಡ್ಡವರು ಎನ್ನುವ ಭಯ, ಗೌರವ ಹೊಂದಿರುವುದು. ಅಲ್ಲದೆ ತಮ್ಮ ಬದುಕನ್ನು ಸಂಸಾರವನ್ನು ಸಾಗಿಸುವ ಹಂಬಲದಿಂದ ಶ್ರೀಮಂತರ ಆಜ್ಞೆಯನ್ನು ದೌರ್ಜನ್ಯವನ್ನು ಮೂಕರಾಗಿ ಅನುಭವಿಸುವುದು. ಆದರೆ ಶ್ರೀಮಂತರು ಇದರ ಸಲುಗೆಯಿಂದ ಬಡವರಿಗೆ ಬಡ್ಡಿ

ಸಾಲದ ಜೊತೆಗೆ ಪತ್ರ ಬರೆಸಿಕೊಳ್ಳುವರು. ತೆರಿಗೆ ಕಟ್ಟಿದ ಮೇಲೆ ಯಾವುದೇ ರಶೀದಿ ನೀಡದೆ, ಬಡ್ಡಿಯನ್ನು ಕಿತ್ತುಕೊಳ್ಳುವರು. ಅದನ್ನು ವಿರೋಧಿಸಿದರೆ ನೀನು ಹಣವನ್ನೆ ಕಟ್ಟಿಲ್ಲ ಎಂದು ಹೆದರಿಸುವುದು. 'ಸಮಾಜ ನಡೆಯುವುದೇ ಭಯದ ಬಲದಿಂದ' ಎನ್ನುವ ಹಾಗೆ ಭಯದಲ್ಲಿಯೇ ರೈತನ ಜೀವನ ಸಾಗುತ್ತದೆ.

ಶ್ರೀಮಂತರು ಬಡ್ಡಿಗೆ ಬಡ್ಡಿ ಬಡ್ಡಿಗೆ ಬಡ್ಡಿ ಸೇರಿಸಿ ಬಡ ರೈತರ ರಕ್ತ ಹೀರುವರು. ಮುಗ್ಧರ ಶ್ರಮವನ್ನು ಬಳಸಿಕೊಂಡು ಅವರಿಗೆ ತಕ್ಕ ಪ್ರತಿಫಲವನ್ನು ಕೊಡದೆ ಶೋಷಿಸುವ ಜಮೀನುದಾರರು, ಕಾರ್ಖಾನೆಗಳ ಮಾಲಿಕರು ತಮ್ಮಂತೆ ಮನುಷ್ಯರು, ಅವರ ಮೇಲೆ ಯಾವುದೇ ಕರುಣೆ ತೋರದೆ ರೈತರ ಕೈಯಿಂದ ಹಣವನ್ನು ಕಿತ್ತುಕೊಳ್ಳುವರು.

ಹೋರಿರಾಮನ ಪರಿಸ್ಥಿತಿ ದಿನೇ ದಿನೇ ಅಧೋಗತಿಗಿಳಿಯುತ್ತಿತ್ತು. ಜೀವನದ ಸಂಘರ್ಷದಲ್ಲಿ ಅವನು ಯಾವಾಗಲೂ ಸೋಲನ್ನೇ ಉಂಡಿದ್ದ. ಆದರೆ ಅವನು ಎಂದೂ ಧೈರ್ಯ ಕಳೆದುಕೊಂಡಿಲ್ಲ. ಈ ಪರಿಸ್ಥಿತಿಯಲ್ಲೂ ಇನ್ನೊಂದು ಸಮಸ್ಯೆ ಸಿಡಿಲಿನ ತರ ಎದುರಾಯಿತು. ಮೂರು ವರ್ಷದ ಗೇಣಿ ಬಾಕಿ ಇತ್ತು. ಮನೆಯನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿ ಇದ್ದ. ಇದು ಸಾಲದು ಎಂಬಂತೆ ಪಂಡಿತ ನೋಖೇರಾಮ ಹೋರಿಯ ಮೇಲೆ ದಾವೆ ಹೂಡುವನು. ಈ ಸಂದರ್ಭದಲ್ಲಿ ದಾತಾದೀನ ಆತ್ಮೀಯತೆಯ ಸೋಗಿನಲ್ಲಿ ಹೋರಿಯ ಹತ್ತಿರ ಬರುವನು. ಸಾಲ ತೀರಿಸುವುದಕ್ಕೆ ನಲವತ್ತು ವರ್ಷದ ಮುದುಕನಾದ ರಾಮಸೇವಕನಿಗೆ ಮಗಳನ್ನು ಕೊಡುವಂತೆ ಸೂಚಿಸುವನು. ರಾಮಸೇವಕನು ಹಿಡುವಳಿದಾರ ಹಾಗೂ ಲೇವಾದೇವಿ ಮಾಡುವವನು. ಅವನಿಗೆ ಹೋರಿರಾಮನ ಚಿಕ್ಕ ಮಗಳನ್ನು ಮದುವೆ ಮಾಡಿದರೆ ಅಳಿಯ ತನ್ನ ಸಾಲವನ್ನು ತೀರಿಸುವನು. ಹಾಗೂ ಮಗಳು ಸುಖವಾಗಿರುತ್ತಾಳೆ ಎಂಬ ಸಲಹೆ ನೀಡುವನು. ಇದರಿಂದಲೂ ದಾತಾದೀನಿಗೆ ಲಾಭವು ದೊರೆಯುತ್ತಿತ್ತು. ಹೋರಿರಾಮನ ಮಗಳನ್ನು ರಾಮಸೇವಕನಿಗೆ ಕೊಟ್ಟು ಮದುವೆ ಮಾಡಿ ಅಳಿಯನಿಂದ ತನ್ನ ಎಲ್ಲಾ ಸಾಲವನ್ನು ಕಟ್ಟಿದರು. ಅಳಿಯನ ಸಾಲವನ್ನು ತೀರಿಸೇ ತೀರಿಸುತ್ತೇನೆ ಎಂದು ನಿರಾಶೆಗೊಳ್ಳದೆ ಕೂಲಿಮಾಡಲು ಮುಂದಾಗುವನು.

ಸಮಾಜದಲ್ಲಿನ ಶ್ರೀಮಂತರು ತಮ್ಮ ಲಾಭಕ್ಕಾಗಿ ಈ ರೀತಿಯ ಮುದುಕನಿಗೆ ಮಗಳ ವಯಸ್ಸಿನ ರೂಪಳನ್ನು ಮದುವೆ ಮಾಡಿಸುವ ವ್ಯಕ್ತಿಗಳೂ ಇದ್ದಾರೆ. ಇದರಿಂದ ಆ ಹುಡುಗಿಯ ಭಾವನೆಗಳನ್ನು ಲೆಕ್ಕಿಸದೆ ಬಡವರ ಪರಿಸ್ಥಿತಿಗಳ ಜೊತೆಗೆ ಈ ರೀತಿಯ ಕೃತ್ಯಗಳಿಗೆ ಶ್ರೀಮಂತರು ಮುಂದಾಗುವರು.

ಸಾಮಾಜಿಕ ಬದುಕಿನಲ್ಲಿ ಹೋರಿರಾಮನಿಗಲ್ಲದೆ ಇಡೀ ಹಳ್ಳಿಗೇ ಗೇಣಿಯ ಹಾಗೂ ಸಾಲದ ಸಮಸ್ಯೆಯ ವಿಪತ್ತು ಬಂದಿತ್ತು. ಪ್ರತಿಯೊಬ್ಬ ರೈತನಿಗೂ ತೊಂದರೆ ನೋವುಗಳನ್ನು ನೀಡುತ್ತಾ ರೈತರನ್ನು ಶೋಷಣೆ ಮಾಡುತ್ತಿದ್ದರು.

ರೈತಾಪಿ ಬದುಕಿನ ವಿನ್ಯಾಸಗಳಲ್ಲಿ ರೈತರು ವ್ಯವಸಾಯವನ್ನು ಹಾಗೂ ಕೂಲಿಯನ್ನು ಅವಲಂಬಿಸಿದ್ದರು. ಸಾಮಾಜಿಕ ಜೀವನದಲ್ಲಿ ಅನೇಕ ರೀತಿಯ ಸಮಸ್ಯೆಗಳನ್ನು ಕಷ್ಟ ನೋವು ಉಪವಾಸಗಳನ್ನು ಅನುಭವಿಸಬೇಕಾಗುತ್ತಿತ್ತು. ಸಾಮಾಜಿಕ ನೀತಿನಿಯಮಗಳ ಹಿನ್ನೆಲೆಯಲ್ಲಿ ಶೋಷಣೆಯನ್ನು ಶ್ರೀಮಂತರು ಮಾಡುತ್ತಿದ್ದರು. ಜಾತಿ ಸಂಬಂಧದ ಹಿನ್ನೆಲೆಯಲ್ಲಿ ಅನೇಕ ಬಡ ರೈತರು ತಮ್ಮ ಆತ್ಮ ಸಾಕ್ಷಿಗೆ ವಿರುದ್ಧವಾಗಿ ನಡೆದುಕೊಳ್ಳಬೇಕಾಗುತ್ತಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಗೆ ಸಿಲುಕಿ ಬದುಕಿನಲ್ಲಿ ದುರಂತವನ್ನು ಅನುಭವಿಸಬೇಕಾಗುತ್ತಿತ್ತು. ರೈತನು ಬದುಕಿನ ಕೊನೆಯ ಗಳಿಗೆಯಲ್ಲೂ ಸಾಮಾಜಿಕ ಜೀವನಕ್ಕೆ ಹೊಂದಿಕೊಂಡು ನಡೆಯಲೇ ಬೇಕಾಗಿತ್ತು. ಹೀಗಾಗಿ ಎಲ್ಲಾ ಶೋಷಣೆಯ ನಿಯಮಗಳಿಗೆ ತಲೆಬಾಗಿ ರೈತ ತನ್ನ ಜೀವನದ ಸಂತೋಷವನ್ನು ಶ್ರೀಮಂತರ ಪಾಲಿಗೆ ಹಾಕಿ ನೊಂದುಬೆಂದು ಸಮಾಜದೊಂದಿಗೆ ಸಾಗಲೇಬೇಕು ಎಂಬುದು ಇಲ್ಲಿ ಚಿತ್ರಿತವಾಗಿದೆ.

**೨. ಆರ್ಥಿಕವಾಗಿ ರೈತಾಪಿ ಬದುಕಿನ ವಿನ್ಯಾಸಗಳು**

ಗೋದಾನ ಕಾದಂಬರಿಯಲ್ಲಿ ರೈತಾಪಿ ಬದುಕಿನ ವಿನ್ಯಾಸಗಳಲ್ಲಿ ಆರ್ಥಿಕತೆಯು ಒಂದು ಪ್ರಮುಖ ಅಂಶವಾಗಿದೆ. ರೈತಾಪಿ ವರ್ಗದಲ್ಲಿ ಆರ್ಥಿಕ ಸ್ಥಿತಿಗತಿಯು ಅತ್ಯಂತ ಬಿಕ್ಕಟ್ಟಿನ ಹಾಗೂ ದುಃಸ್ಥಿತಿಯ ಪರಿಸ್ಥಿತಿಯಲ್ಲಿದೆ. ರೈತರು ಶ್ರಮಪಟ್ಟು ದುಡಿದರು ಅವರಿಗೆ ಸಾಲ ಸೂಲಗಳನ್ನು ಕಟ್ಟಿಕೊಂಡು ತಮ್ಮ ಜೀವನ ನಡೆಸುವುದು ಕಷ್ಟವಾಗಿರುತ್ತದೆ. ವ್ಯವಸಾಯವನ್ನೇ ಪ್ರಮುಖ ವೃತ್ತಿಯಾಗಿಸಿಕೊಂಡ ರೈತರು ಕೂಲಿ ಮಾಡುವಂತಹ ಪರಿಸ್ಥಿತಿಯನ್ನು ಕಾಣಬಹುದು. ವ್ಯವಸಾಯವೇ ಪ್ರಮುಖವಾದ ವೃತ್ತಿ. ಇಲ್ಲಿ ಕಾಲಕ್ಕೆ ಸರಿಯಾಗಿ ಮಳೆ ಬರಬೇಕು. ಬಂದ ಮೇಲೆ ಬೆಳೆ ಸರಿಯಾಗಿ ಬಂದು ನಂತರ ಬಡವರ ಮನೆಯನ್ನು ಸೇರುವ ಮೊದಲೇ ಅದು ಶ್ರೀಮಂತ ಗೇಣಿಗೆ ಹಾಗೂ ಸಾಲ ತೆಗೆದುಕೊಂಡ ಬಡ್ಡಿಗೆ ಜಮಾವಾಗುತ್ತದೆ. ಅದರಲ್ಲಿ ಬಡವನಿಗೆ ಸಿಗುವುದು ಅಲ್ಪ ಸ್ವಲ್ಪ ಕಾಳುಕಡಿ ಮಾತ್ರ, ಇದರಿಂದಲೇ ತಮ್ಮ ಸಂಸಾರವನ್ನು ವರ್ಷವಿಡಿ ಬದುಕಿಸಬೇಕು. ಇದು ಸಾಲದೆ, ನಂತರ ಕೂಲಿ ಮಾಡಲು ಮುಂದಾಗುವರು. ಅದರಿಂದ ಬರುವ ಕೂಲಿಯಿಂದ ಬಡವರ ಬದುಕಿನ ಬವಣೆಯಂತೂ ನೀಗದೆ ಹಸಿವಿನಲ್ಲಿ ಮುಂದೆ ಸಾಗುತ್ತಲೇ ಇರುತ್ತದೆ.

ಈ ರೀತಿಯ ಸ್ಥಿತಿಯಲ್ಲಿ ಆರ್ಥಿಕ ಸ್ಥಿತಿ ಎಂಬುದು ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ನಾವು ಗಮನಿಸಬೇಕಾಗುತ್ತದೆ. ರೈತನ ಸ್ಥಿತಿಗತಿಯನ್ನು ಯಾರು ಗಮನಿಸದೆ, ಅವರ ಶ್ರಮದ ನೆಲೆಯಲ್ಲಿ ನಿಂತ ಶ್ರೀಮಂತರು ತಮ್ಮ ಸುಖ ಸಂತೋಷವನ್ನು ಕಾಣಲು ಮಾತ್ರ ಮುಂದಾಗುವರು. ರೈತನು ತನ್ನ ಜೀವನವನ್ನು ಉದ್ದಕ್ಕೂ ಸಹನೆಯಿಂದಲೇ ಸಾಗಿಸುವನು. ಶ್ರೀಮಂತರ ಶೋಷಣೆಯಲ್ಲಿ ಬಡವರ ಬದುಕು ಕಮರಿ ಹೋಗುವುದು. ರೈತನ ಬದುಕಿನ ಸ್ಥಿತಿ ಅವನು ಸಮಾಜದೊಂದಿಗೆ ತನ್ನ ಅವಶ್ಯಕತೆಗಳನ್ನು ಹಾಗೂ ಶ್ರೀಮಂತರ ಶೋಷಣೆಯಿಂದಲೂ ಜೀವನ

ಸಾಗಿಸುವುದು ರೈತರಿಗೆ ತುಂಬಾ ಕಷ್ಟವಾದರೂ ಯಾರೂ ನಿರಾಸೆ ಹೊಂದದೆ ತಮ್ಮ ಸಂಸಾರವನ್ನು ಸಾಗಿಸುತ್ತಲೇ ಬರುತ್ತಿದ್ದಾರೆ.

ರೈತ ಬೆಳೆದ ಕಾಳು ಕಡಿಗಳನ್ನು ಗೇಣಿ ರೂಪದಲ್ಲಿ ಶ್ರೀಮಂತರು ತೆಗೆದುಕೊಳ್ಳುತ್ತಿದ್ದರು. ರೈತರು ಮಾಡದ ತಪ್ಪಿಗಾಗಿ ಅವರಿಗೆ ದಂಡ ಹಾಕುತ್ತಿದ್ದರು. ಬೇರೆ ಬೇರೆ ಕಾರಣಗಳಿಗೂ ಹಣವನ್ನು ಕೇಳುತ್ತಿದ್ದರು. ಕೊಡದಿದ್ದರೆ ರೈತರು ತಮ್ಮ ಭೂಮಿಯಲ್ಲಿ ಕಾಲು ಇಡಲು ಸಾಧ್ಯವಾಗದ ರೀತಿಯಲ್ಲಿ ಶ್ರೀಮಂತರು ಆಜ್ಞೆಯನ್ನು ಹೊರಡಿಸುತ್ತಿದ್ದರು. ಇದರಿಂದ ರೈತರು ತಾವು ದುಡಿದಿದ್ದೂ ಸಾಲದೇ ಲೇವಾದೇವಿಯವರ ಮೊರೆ ಹೋಗುತ್ತಿದ್ದರು. ಅವರಿಂದ ಸಾಲ ಪಡೆಯುತ್ತಿದ್ದರು. ಅವರು ಕೇಳುವಷ್ಟು ಬಡ್ಡಿಗೆ ಹಣ ತೆಗೆದುಕೊಂಡು ತಮ್ಮ ಸಾಲ ತೀರಿಸಲು ಪ್ರಯತ್ನಿಸುತ್ತಿದ್ದರು. ರೈತರ ದುಃಸ್ಥಿತಿ ಸಾಲ ಮಾಡಿಯೂ ಶ್ರೀಮಂತರ ಸುಖ ಸಂತೋಷಕ್ಕೆ ಅವರ ಅವಶ್ಯಕತೆಗಳಿಗೆ ರೈತ ನಾನಾ ಅವಸ್ಥೆಯನ್ನು ಪಟ್ಟು ಹಣ ನೀಡುತ್ತಿದ್ದುದು ರೈತರ ಕರ್ಮವಾಗಿತ್ತು.

ಬಡವನಾಗಿ ಹುಟ್ಟಿದ ತಪ್ಪಿಗೆ ತನ್ನ ಎಲ್ಲಾ ಸಂತೋಷವನ್ನೂ ತ್ಯಾಗ ಮಾಡಿ ನೋವು ಹಸಿವಿನ ದುಃಖದಲ್ಲಿ ಬೆಂದು, ತಮ್ಮ ಸಂಸಾರವನ್ನು ಉಪವಾಸದಲ್ಲಿಟ್ಟು, ತಮ್ಮ ಮಕ್ಕಳಿಗೆ ಮೂರು ಹೊತ್ತು ಅನ್ನ ಹಾಕದೇ ಇದ್ದರೂ ಶ್ರೀಮಂತರ ಆಜ್ಞೆಯನ್ನು ಬಡ ರೈತರು ಪಾಲಿಸಲೇಬೇಕಾಗಿತ್ತು. ಹೀಗಿರುವಾಗ ಬಡವರ ಆರ್ಥಿಕ ಪರಿಸ್ಥಿತಿ ಮಾತ್ರ ಸುಧಾರಣೆಯಾಗಲೂ ಸಾಧ್ಯವಿರಲಿಲ್ಲ. ರೈತರು ತಾವು ದುಡಿದಿದ್ದೂ ಸಾಲದೆ ತಮ್ಮ ಮನೆ ಹೊಲಗಳ ಮೇಲೆಯೂ ಸಾಲ ಪಡೆದು ಅದನ್ನು ಬಿಡಿಸಲು ಆಗದೆ, ಬಡ್ಡಿ ಕಟ್ಟಲೂ ಆಗದೆ ಅನೇಕ ರೈತರು ಆತ್ಮಹತ್ಯೆಗೆ ಶರಣಾಗುತ್ತಿದ್ದರು.

ಗೋದಾನ ಕಾದಂಬರಿಯಲ್ಲಿ ರೈತರು ಕೆಲವರು ಭೂಮಿ ಹೊಂದಿದ್ದರು. ಇನ್ನು ಕೆಲವರು ಮನೆ ಮಾತ್ರ ಹೊಂದಿದ್ದರು. ಇನ್ನೂ ಕೆಲವರು ಯಾವುದೂ ಇಲ್ಲದೆ ಕೂಲಿಯಿಂದ ಜೀವನ ನಡೆಸುತ್ತಿದ್ದರು. ಭೂಮಿ ಇದ್ದವರೂ ಅದರ ಗೇಣಿ ಹಾಗೂ ತೊಂದರೆಗಳನ್ನು ಎಲ್ಲರೂ ಅನುಭವಿಸುತ್ತಿದ್ದರು.

ಆರ್ಥಿಕತೆಗೂ ನೈತಿಕತೆಗೂ ನೇರವಾದ ಸಂಬಂಧವಿದೆ. ಆರ್ಥಿಕವಾಗಿ ಭದ್ರವಾಗಿರುವವರು ನೈತಿಕವಾಗಿ ಯಾವುದೇ ಮೌಲ್ಯಗಳನ್ನು ಉಳಿಸಿಕೊಂಡಿರಲಿಲ್ಲ. ಸೊಕ್ಕಿನಲ್ಲಿ ತಮಗೆ ಇಷ್ಟ ಬಂದ ಹಾಗೆ ಯಾವುದೇ ಜೀವನ ಮೌಲ್ಯಗಳ ಬಗ್ಗೆ ಎಚ್ಚರಿಕೆ ಇಲ್ಲದೆ ಮನಬಂದಂತೆ ಬದುಕುತ್ತಿದ್ದರು. ಆದರೆ ರೈತರು ಆರ್ಥಿಕವಾಗಿ ದುರ್ಬಲರು. ಆದರೆ ಅವರು ನೈತಿಕತೆಯನ್ನೇ ಹಿಡಿದು ಬದುಕುವವರು. ಜೀವನದಲ್ಲಿ ಯಾವ ರೀತಿಯಲ್ಲಿ ವಿಚಾರ ಮಾಡಿದರೂ ಬಡವರಿಗೆ ದಂಡ ಬಹಿಷ್ಕಾರ ಹಾಗೂ ಅವಮಾನ ತಪ್ಪಿದ್ದಲ್ಲ. ಶ್ರೀಮಂತರು ಮಾಡಿದ್ದೆ ನೀತಿ. ಆದರೆ ಬಡವರನ್ನು ಅನೀತಿಯಲ್ಲಿ ನರಳಿಸಿ ಶೋಷಣೆ ಮಾಡಿ ಬಡವರ ಅಂತಃಕರಣದ ವಿಚಾರಗಳಿಗೆ ಅಡ್ಡಿ ಮಾಡುತ್ತಿದ್ದರು. ಆದರೆ ಹೋರಿರಾಮ ಹಣವನ್ನು ಕೊಟ್ಟು ಹಸುವನ್ನು ತಂದರೂ, ಆ ಹಸುವನ್ನು

ಉಳಿಸಿಕೊಳ್ಳಲು ಆಗಲಿಲ್ಲ. ತನ್ನ ಸಹೋದರರೆ ಅಣ್ಣನ ಸಂತೋಷವನ್ನು ಹಂಚಿಕೊಳ್ಳದೆ ಅಸೂಯೆಯಿಂದ ಸಾಲ ಮಾಡಿದ ಹಸುವನ್ನು ಮೋಸದಿಂದ ಕೊಂದು ಹಾಕುವರು. ಅದನ್ನು ಸಹಿಸಿಕೊಳ್ಳುವ ದೊಡ್ಡ ಮನಸ್ಸು ಹೋರಿರಾಮನದು. ಸಂಬಂಧಗಳಿಗೆ ಮಹತ್ವ ಕೊಡುವ ವ್ಯಕ್ತಿಯಾಗಿದ್ದಾನೆ.

ಹೋರಿರಾಮ ಕೊನೆಗೆ ಪ್ರಾಣ ಬಿಡುವ ಸಂದರ್ಭದಲ್ಲಿಯೂ ತನ್ನ ಕಡು ಬಡತನದಲ್ಲೂ ಹಸಿವಿನಿಂದ ನರಳಿದರೂ ತಾನು ಒಂದು ಹಸು ಕಟ್ಟುವ ಕನಸು ಕಾಣುತ್ತಾನೆ. ತಾನು ಪ್ರಾಣ ಬಿಡುವ ಮುಂಚೆ ಹಸುವಿನ ಕಲ್ಪನೆಯನ್ನು ಮಾಡಿಕೊಳ್ಳುತ್ತಾನೆ. ರೈತರು ಒಂದು ಚಿಕ್ಕ ಆಸೆಯನ್ನು ಸಹ ಈಡೇರಿಸಿಕೊಳ್ಳಲಾಗದ ಸಂದರ್ಭವನ್ನು ಕಂಡಾಗ ರೈತರ ಪರಿಸ್ಥಿತಿಯು ಮನ ಮಿಡಿಯುವಂತಹದ್ದು. ಬಡ ರೈತರಿಗೆ ತಮ್ಮ ಮನಸ್ಸಿನಲ್ಲಿ ಯೋಜನೆಗಳನ್ನು ಹಾಕಿಕೊಳ್ಳುವ ಸಾಧ್ಯತೆ ಇದೆಯೇ ಹೊರತು ಅವುಗಳನ್ನು ಕಾರ್ಯರೂಪಕ್ಕೆ ತರುವ ಹಾಗೂ ಅನುಭವಿಸುವ ಸಾಮರ್ಥ್ಯವಿರಲಿಲ್ಲ. ದುಡಿದು ದುಡಿದು ನಲವತ್ತು ವರ್ಷಕ್ಕೆ ತಮ್ಮ ಪ್ರಾಣ ಬಿಡುವ ಪರಿಸ್ಥಿತಿ ರೈತರದ್ದು.

ರೈತರ ಮನೆಯಲ್ಲಿ ಊಟದ ಪರಿಸ್ಥಿತಿ ತುಂಬ ವಿಚಿತ್ರವಾಗಿರುವುದು ಕಂಡುಬರುತ್ತದೆ. ರೈತ ದೇಶಕ್ಕೆ ಅನ್ನ ಹಾಕುವವನು. ಆದರೆ ರೈತರು ಮಾತ್ರ ಹುರಿದ ಕಾಳುಗಳಿಂದ ಹೊಟ್ಟೆ ತುಂಬಿಸಿಕೊಂಡು ಬದುಕುವರು. ಇವರನ್ನು ಶ್ರೀಮಂತರು ಆರ್ಥಿಕವಾಗಿ ಯಾವಾಗಲೂ ಬೆಳೆಯಲು ಬಿಡುವುದಿಲ್ಲ. ರೊಟ್ಟಿ ಹುರಿದ ಕಾಳು ಇಲ್ಲವಾದರೆ ನೀರು ಇವು ರೈತರ ಜೀವವನ್ನು ಉಳಿಸುವ ಪದಾರ್ಥಗಳು. ತಮಗೆ ಸುಖವಾಗಿ ಮೂರು ಹೊತ್ತು ಊಟ ದೊರೆತರೆ ಅವರೆ ಭಾಗ್ಯಶ್ಯಾಲಿಗಳು. ಆದರೆ ರೈತರ ಪರಿಸ್ಥಿತಿ, ಅವರ ಕುಟುಂಬದವರು ಚಿಂದಿ ಸೀರೆಯಲ್ಲಿ ಅರ್ಧಹೊಟ್ಟೆ ಮಾಡಿಕೊಂಡು, ಹಾಸಲು ಹೊದೆಯಲು ಇರದೆ ಹೋದರು, ಸಹಿಸಿಕೊಂಡು ಮಾನಕ್ಕೆ ಅಂಜಿಕೊಂಡು ಜೀವನದಲ್ಲಿ ಹೆಜ್ಜೆ ಹಾಕಬೇಕಾಗಿತ್ತು.

ತಮ್ಮ ಮಕ್ಕಳು ರೋಗರುಜಿನಗಳಿಂದ ಬಳಲಿದರೂ, ಅವರು ಹಸಿವಿನಿಂದ ಬಿಕ್ಷೆ ಬೇಡುವಂತಾದರೂ ಶ್ರೀಮಂತರ ಆಜ್ಞೆಯ ಅನುಸಾರ ಮಾತ್ರ ಹಣ ಅವರ ಕೈ ಸೇರಬೇಕಾಗಿತ್ತು. ಮಕ್ಕಳು ಹಸಿವನ್ನು ತಾಳಲಾರದೆ ನೊಂದುಕೊಳ್ಳುವಂತಹ ಹಾಗೂ ಬೆಳವಣಿಗೆಯಲ್ಲಿ ಕುಂಠಿತವಾಗುವಂತಹ ಮತ್ತು ಮುಗ್ಧಭಾವಗಳು ಕಮರಿ ಹೋಗುವಂತಹ ಪರಿಸ್ಥಿತಿ ಅವರದಾಗಿತ್ತು. ಇಂತಹ ಪರಿಸ್ಥಿತಿಯಲ್ಲೂ ರೈತರು ಯಾವುದೇ ರೀತಿಯಲ್ಲಿ ಹತಾಶೆಗೊಳ್ಳದೆ ಜೀವನವನ್ನು ಸಾಗಿಸುವರು. ಮಕ್ಕಳನ್ನು ತೋರಿಸಿ ಸಾಲ ಮಾಡಿದರೂ ಅಲ್ಲಿ ಸಾಲದ ಬಡ್ಡಿ ಮಾತ್ರ ಯಾವಾಗಲೂ ಹೆಚ್ಚುತ್ತಲೇ ಹೋಗುತ್ತದೆ. ಮಗನಾದ ಗೋಬರನನ್ನು ನೋಡಿ ಹೋರಿರಾಮನು ದುಲಾರಿಯ ಹತ್ತಿರ ಸಾಲ ಪಡೆಯುವನು. ರೈತರು ಬಡ್ಡಿ ಕಟ್ಟುವಲ್ಲಿಯೇ ಸೋತು ಅಸಲು ಕಟ್ಟುವುದರೊಳಗೆ ತಮ್ಮ ಆಸ್ತಿಯನ್ನು ಅವರಿಗೆ ಬಿಟ್ಟು ಹೊರಟು ಹೋಗಬೇಕಾಗಿ

ಬರುತ್ತಿತ್ತು. ರೈತರ ಆರ್ಥಿಕ ಪರಿಸ್ಥಿತಿ ಎಂತಹದ್ದು ಎಂದರೆ ತಮ್ಮ ಮಕ್ಕಳಿಗೂ ಮದುವೆ ಮಾಡಲು ನರಳುವ, ಕೊರಗುವ ಸ್ಥಿತಿಯಾಗಿತ್ತು. ತನ್ನ ಮಕ್ಕಳನ್ನು ಕಷ್ಟದಲ್ಲೆ ಸಾಕಿ ನಂತರ ಯಾವುದೆ ರೀತಿ ವಿಚಾರ ಮಾಡದೆ ಮುದುಕರಿಗೆ ಕೊಟ್ಟು ಮದುವೆ ಮಾಡಬೇಕಾದ ಅನಿವಾರ್ಯತೆ ಇತ್ತು. ಇಲ್ಲಿ ಮಕ್ಕಳ ಮನಸ್ಸು ಹಾಗೂ ಅವರ ಆಸೆಗಳಿಗೆ ಬೆಲೆ ಕೊಡದೆ ತಮ್ಮ ಜವಾಬ್ದಾರಿಯ ಜೊತೆಗೆ ಬಡತನದ ಬವಣೆಯಲ್ಲಿನ ಮಕ್ಕಳನ್ನೇ ಉಳ್ಳವರು ತಮ್ಮ ಲಾಭಕೋರತನಕ್ಕೆ ದುರುಪಯೋಗ ಮಾಡಿಕೊಳ್ಳುತ್ತಿದ್ದರು.

ಬಡರೈತ ತನ್ನ ಮಗಳ ಮದುವೆಗೆ ಹಣವನ್ನು ಖರ್ಚು ಮಾಡದೆ ಒಪ್ಪಿದ ವರನನ್ನು ತರದೆ ಮದುವೆ ಮಾಡುವನು. ಈ ಪರಿಸ್ಥಿತಿಯಲ್ಲಿ ರೈತನು ಮಾನವೀಯ ಮೌಲ್ಯಗಳಿಗೆ ಬೆಲೆ ಕೊಡದೆ ನಡೆದುಕೊಳ್ಳುವನು. ಬರೀ ನಿರಾಸೆ ನಿಂದನೆಗಳನ್ನು ಹೊತ್ತು ಬದುಕುವನು. ರೈತನ ಹಾಗೂ ಹೋರಿರಾಮನ ಪರಿಸ್ಥಿತಿ ಎಂತಹ ದುಃಸ್ಥಿತಿಯಲ್ಲಿ ಇತ್ತು ಎಂದರೆ ಅವರ ಹತ್ತಿರ ಹಣ ಇರದೇ ಹೋದರೂ, ಅವರಿಗೆ ದಂಡ ಹಾಕುವರು. ಅದಕ್ಕೂ ರೈತರು ಸಾಲ ಮಾಡಬೇಕು. ಇಲ್ಲಿ ಸಾಲದ ಮೇಲೆ ಸಾಲ ಮಾಡಿಸುವುದು ಶ್ರೀಮಂತರ ಕುತಂತ್ರವಾಗಿದೆ. ಬಡವರು ತಮ್ಮ ಪ್ರಾಣ ಬಿಟ್ಟರೂ ಅವರಲ್ಲಿ ಬಿಡಿಗಾಸು ಇರುತ್ತಿರಲಿಲ್ಲ. ಸಾಲ ಮಾಡಿ ಲಂಚ ಕೊಟ್ಟು ತಮ್ಮ ಮರ್ಯದೆಯನ್ನು ಉಳಿಸಿಕೊಳ್ಳಬೇಕಾಗುತ್ತಿತ್ತು. ಮೂಕನಂತೆ ರೈತರು ಶ್ರೀಮಂತರು ಹೇಳಿದಂತೆ ಕೇಳಿ ಸಾಲಕ್ಕೆ ಕೈಚಾಚಿ ಮತ್ತಷ್ಟೂ ಶೋಷಣೆಯಲ್ಲಿ ಮುಳುಗುವರು.

ರೈತನು ಶ್ರಮಪಟ್ಟದ್ದನ್ನು ಶ್ರೀಮಂತರು ಬಲವಂತವಾಗಿ ಅವರ ಕೈಯಿಂದ ಕಿತ್ತುಕೊಳ್ಳುವರು. ಅವನ ಪರಿಸ್ಥಿತಿ ಅವನ ನೋವು ಸಂಕಟ ಹಸಿವಿನ ಗೊಡವೆಯ ಬಗ್ಗೆ ತಲೆ ಕೆಡಿಸಿಕೊಳ್ಳದೆ ವರ್ಷಪೂರ್ತಿಯಾಗಿ ದುಡಿದ ಶ್ರಮದ ಫಲದ ಹಣವನ್ನು ರೈತನು ಕೈಗೆ ತೆಗೆದುಕೊಂಡ ಕೊಡಲೆ ಸಾಲಗಾರರು ಎಲ್ಲಾ ಕಡೆಯಿಂದಲೂ ಬಂದು ಅವನನ್ನು ಸಂಪೂರ್ಣವಾಗಿ ಲೂಟಿ ಮಾಡುವರು. ಮನೆಯ ಹೆಂಡತಿ ಮಕ್ಕಳಿಗೂ ಒಂದು ರೂಪಾಯಿಯನ್ನೂ ಕೊಡದ ಪರಿಸ್ಥಿತಿಯಲ್ಲಿ ಮಕ್ಕಳಿಗೆ ಹೇಳಲಾರದೆ ಹೆಂಡತಿಗೆ ಸಮಾಧಾನ ಮಾಡದೆ ನರಕದ ಜೀವನ ಸಾಗಿಸುವುದು ರೈತನದು. ನಂಬಿದವರಿಗೆ ಸಂತೋಷ ಕೊಡದೆ ಇದ್ದರೂ ಒಂದು ದಿನ ಪೂರ್ತಿಯಾಗಿ ಹೊಟ್ಟೆ ತುಂಬ ಅನ್ನ ಹಾಕಲು ರೈತನಿಗೆ ಸಾಧ್ಯವಾಗುವುದಿಲ್ಲ. ಸಾಲಗಾರರು ಎಲ್ಲವನ್ನೂ ಕಿತ್ತುಕೊಂಡ ಮೇಲೆ ಕೊನೆಗೆ ಒಂದೇ ಆಣೆಯನ್ನು ಅಡಗಿಸಿಟ್ಟುಕೊಂಡು ಅದಕ್ಕೆ ಕುಡಿದು ಬಂದು ನಾಟಕ ಮಾಡುವಂತಹ ಪರಿಸ್ಥಿತಿ ಅವರಿಗಿತ್ತು. ಅದರ ನಸೆ ಇಲ್ಲದಿದ್ದರೂ ಸುಮ್ಮನೆ ತುಂಬ ಕುಡಿದವನಂತೆ ನಟಿಸುತ್ತಿದ್ದರು. ಇನ್ನುಳಿದ ಜನರು ಇವನು ತುಂಬ ಕುಡಿದಿದ್ದಾನೆ ಎಂದುಕೊಳ್ಳಲಿ ಎಂದು ಹೀಗೆ ಮಾಡುವನು. ವರ್ಷ ಪೂರ್ತಿಯಾಗಿ ದುಡಿದು ಶ್ರಮಪಟ್ಟ ಹಣವನ್ನು ಎಲ್ಲರೂ ಕಿತ್ತುಕೊಂಡು ಹೋದ ಮೇಲೆ ಈ ರೀತಿ ನಾಟಕ ಮಾಡಿಯಾದರೂ ತನ್ನ ನೋವನ್ನು ಮರೆಯುವ ತಂತ್ರ ರೈತನದ್ದಾಗಿದೆ.

ತಾವು ಹೆತ್ತ ಮಕ್ಕಳಿಗೆ ಹಾಲು ಉಣಿಸಲಾರದಷ್ಟು ಆರ್ಥಿಕ ದುಃಸ್ಥಿತಿ ಅವರನ್ನು ದೈಹಿಕವಾಗಿ ದುರ್ಬಲಗೊಳಿಸಿದೆ. ಜುನಿಯಾಳ ಮಗುವಿಗೂ ಹಾಲು ಉಣಿಸಲು ಆಗದ ಪರಿಸ್ಥಿತಿ ಇತ್ತು. ಲೋಕವನ್ನು ಆಗತಾನೇ ನೋಡಿದ ಆ ಮಗುವಿಗೆ ಸುಖ ಎಂಬುದು ಇಲ್ಲದೆ ಬರೀ ಹಸಿವಿನ ಆರ್ತನಾದ ಅಳು ಸಂಕಟವನ್ನು ಮಗು ಅನುಭವಿಸುತ್ತಿತ್ತು. ಮಗುವಿಗೆ ಕಾಯಿಲೆ ಆದರೂ ಅದಕ್ಕೆ ಒಂದು ವೈದ್ಯಕೀಯ ಸೌಲಭವನ್ನು ಕೊಡಿಸಲಾಗದ ದುಃಸ್ಥಿತಿ ಅವರದು.

ಹೀಗೆ ಅನೇಕ ರೈತರು ತಮ್ಮ ಮಕ್ಕಳನ್ನೇ ಕಳೆದುಕೊಂಡ ಉದಾಹರಣೆಗಳನ್ನು ಕಾಣಬಹುದು. ರೈತನು ಮೂರು, ದಿನಗಳವರೆಗೆ ಉಪವಾಸ ಇದ್ದರೂ ಯಾರು ಸಹಾಯ ಸಹಾನುಭೂತಿ ತೋರದೆ ತಮ್ಮ ಸ್ವಾರ್ಥಕ್ಕಾಗಿಯೆ ಸಾಯುವಂತಹ ಸ್ಥಿತಿ ಇತ್ತು.

ಕೂಲಿಯನು ಒಬ್ಬ ಮನುಷ್ಯ ಎಂಬುದನ್ನು ಮರೆತು ಅವನನ್ನು ಹಿಂಸೆಮಾಡುತ್ತಿದ್ದರು. ಅವನನ್ನು ಯಂತ್ರದಂತೆ ದುಡಿಸಿಕೊಳ್ಳುತ್ತಿದ್ದರು. ಅವನ ಹೊಟ್ಟೆಬಟ್ಟೆಯ ಬಗ್ಗೆಯಾಗಲಿ, ಅವನ ಆರೋಗ್ಯದ ಬಗ್ಗೆಯಾಗಲಿ ಶ್ರೀಮಂತರು ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ರೈತನ ವ್ಯಕ್ತಿತ್ವಕ್ಕೆ ಧಕ್ಕೆ ಬರುವಂತೆ ಮಾತನಾಡಿ ಅವನನ್ನೇ ಅವಮಾನಗೊಳಿಸುವರು. ಶ್ರಮ ಬಡವರದು; ಫಲ ಸಂತೋಷ ಮಾತ್ರ ಶ್ರೀಮಂತರದ್ದು.

ಮನುಷ್ಯ ಮನುಷ್ಯನೇ ಗೌರವಿಸದೆ ಇದ್ದರೂ ಮಾನವೀಯತೆಯ ಅಂಶಗಳೂ ಇರಲಿಲ್ಲ. ಅವರು ತಮ್ಮದು ಮಾತ್ರ ಜೀವ ಎಂದು, ಬೇರೆಯವರದು ಜೀವವೇ ಅಲ್ಲ ಎಂಬ ಭಾವನೆಯನ್ನು ತಾಳುವರು. ಕರುಣೆ ತೋರಿಸದೆ ರೈತನನ್ನು ಹೀನಾಮಾನವಾಗಿ ನಡೆಸಿಕೊಳ್ಳುವರು. ಬಡವರೊಂದಿಗೆ, ಹಾಗೂ ಅವರ ಹೆಣ್ಣು ಮಕ್ಕಳೊಂದಿಗೆ ಅನೈತಿಕ ಸಂಬಂಧ ಹೊಂದುವುದು ಹಾಗೂ ಅವರನ್ನು ಭೋಗದ ವಸ್ತುವಾಗಿ ನೋಡುವುದು ಸಾಮಾನ್ಯವಾಗಿತ್ತು. ಮಾನವೀಯತೆಯನ್ನು ಮರೆತು ಶ್ರೀಮಂತರು ಬಡವರೊಂದಿಗೆ ವರ್ತಿಸುವುದನ್ನು ಇಲ್ಲಿ ಸೂಕ್ಷ್ಮವಾಗಿ ಚಿತ್ರಿಸಲಾಗಿದೆ.

ಬಡವರ ಹಸಿವಿನಲ್ಲಿ ಶ್ರೀಮಂತರು ಮನರಂಜನೆ ಕಾಣುತ್ತಿದ್ದರು. ಮಿರ್ಜಾ ಎಂಬ ವ್ಯಕ್ತಿಯು ಕೂಲಿ ಕೊಟ್ಟು ಬಡವರನ್ನು ಕಬಡ್ಡಿ ಆಡಲು ದಿನಕ್ಕೆ ಆರು ಆಣೆಯಂತೆ ಕರೆದುಕೊಂಡು ಹೋಗಿ ಅವರನ್ನು ಆಡಲು ಬಿಟ್ಟು ಮನರಂಜನೆಯ ಜೊತೆಗೆ ಟಿಕೇಟ್ ಮಾಡಿ ಅದರಿಂದ ತಾನು ಹಣ ಗಳಿಸುತ್ತಿದ್ದನು.

ಬಡವರು ತಮ್ಮ ಹಸುವನ್ನು ನೀಗಿಸಿಕೊಳ್ಳಲು ಮಾಡಬಾರದ ಕೆಲಸವನ್ನು ಮಾಡುವ ಅನಿವಾರ್ಯತೆ ಇತ್ತು. ಕೆಲಸ ಸಿಕ್ಕರೆ ಸಾಕು. ಆ ಕೆಲಸ ಏನು, ಏಕೆ ಎಂಬ ಪ್ರಶ್ನೆ ಕೇಳದೆ ಆ ಕೆಲಸಕ್ಕೆ ಕೂಲಿ ಸಿಕ್ಕರೆ ಸಾಕು, ಅದರಿಂದ ತಮ್ಮ ಮನೆ ನಡೆದರೆ ಸಾಕು ಎಂಬುದು ರೈತರ ಸ್ಥಿತಿಯಾಗಿತ್ತು.

ಶ್ರೀಮಂತರು ಕೊಟ್ಟ ಸಾಲಕ್ಕೆ ತಮ್ಮ ಹೊಲಗದ್ದೆಯಲ್ಲಿ ದುಡಿಸಿಕೊಳ್ಳುವುದು ರೈತರು ಒಪ್ಪದಿದ್ದರೆ ಅವರ ಹಣವನ್ನು ಆ ಕ್ಷಣ ನೀಡಬೇಕು. ಇಲ್ಲವಾದರೆ ರಿಪೋರ್ಟ್

ಮಾಡಿ ಜೈಲಿಗೆ ಕಳಿಸುವಂತೆ ಹೆದರಿಸುವರು. ಶ್ರೀಮಂತರ ಹೊಲ ಗದ್ದೆಗಳಲ್ಲಿ ತಮ್ಮ ಕುಟುಂಬದವರು ಪುಕ್ಕಟೆ ಶ್ರಮದಾನ ಮಾಡಬೇಕು. ಅಲ್ಲದೆ ಶ್ರೀಮಂತರ ದರ್ಪದ ಮಾತುಗಳನ್ನು ಹಾಗೂ ಅವರ ದೌರ್ಜನ್ಯವನ್ನು ಸಹಿಸಿಕೊಂಡು ವಿಶ್ರಾಂತಿ ತೆಗೆದುಕೊಳ್ಳದೆ ಮಿಶಿನ್ನಿನಂತೆ ದುಡಿಯಬೇಕು. ಇಲ್ಲವಾದರೆ ಬರೀ ಬೈಗುಳ ಅವರ ಮನ ನಾಟಿ ನೋವು ಉಂಡರೂ ಕೆಲಸ ಮಾತ್ರ ನಿಲ್ಲಿಸಬಾರದು. ಹೀಗೆ ರೈತನ ಶೋಷಣೆಯನ್ನು ಮಾಡುವರು. ರೈತನ ಆರ್ಥಿಕ ಪರಿಸ್ಥಿತಿಯ ಪ್ರತಿರೂಪವಾಗಿ ಹೋರಿರಾಮನು ಕಾಣುತ್ತಾನೆ. ಇಡೀ ಕಾದಂಬರಿಯ ಉದ್ದಕ್ಕೂ ತನ್ನ ನೋವಿನ ಹಾಗೂ ಶೋಷಣೆಯಲ್ಲಿಯೇ ಬಾಳನ್ನು ಮುಂದುವರಿಸುವಂತಹ ಪಾತ್ರವಾಗಿದೆ. ಹೋರಿರಾಮ ಹಾಗೂ ರೈತರು ಸಾಮಾಜಿಕವಾಗಿ ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಎಲ್ಲಾ ರೀತಿಯಿಂದಲೂ ಬದುಕನ್ನು ಸಂರಕ್ಷಿಸಿಕೊಳ್ಳಬೇಕಾಗುತ್ತದೆ. ಆರ್ಥಿಕ ಪರಿಸ್ಥಿತಿಯಲ್ಲಿ ಶ್ರೀಮಂತರು ಒದಗಿಸಿಕೊಂಡ ರೀತಿನೀತಿಗಳಿಗೆ ಬಡರೈತರು ಬದ್ಧರಾಗಿರುತ್ತಿದ್ದರು.

ರಾಜಕೀಯವಾಗಿಯೂ ರೈತರನ್ನು ಶೋಷಣೆ ಮಾಡಲಾಗುತ್ತಿತ್ತು. ಹೆಚ್ಚಿನ ಬಡ್ಡಿ ತೆಗೆದುಕೊಳ್ಳಬಾರದು ಎಂದು ಲೇವಾದೇವಿಯವರಿಗೆ ಆದೇಶ ಹೊರಡಿಸಿದರೂ ಕೂಡ ಅವರು ಹೆಚ್ಚಿನ ಬಡ್ಡಿಯನ್ನು ತೆಗೆದುಕೊಳ್ಳದೆ ಬಿಡುತ್ತಿರಲಿಲ್ಲ. ಬಡವರಿಗಾಗಿ ಯಾವುದೇ ಕಾಯಿದೆಗಳು ಬಂದರೂ ರೈತನ ಜೀವನ ಮಾತ್ರ ಸುಧಾರಣೆಯಾಗುತ್ತಿರಲಿಲ್ಲ. ರೈತರು ಶ್ರೀಮಂತರು ಮಾಡಿದ ಮೋಡಿಗೆ ಸಿಲುಕಿಕೊಂಡು ಬಲೆಗೆ ಬಿದ್ದ ಮೀನಿನಂತೆ ಪ್ರಾಣ ಉಳಿಸಿಕೊಳ್ಳಲು ಪ್ರಯತ್ನಿಸುವರು. ಹೀಗೆ ರೈತರ ಬದುಕು ಎಂಬುದು ನಾನಾ ರೀತಿಯ ಶೋಷಣೆಯಲ್ಲಿಯೇ ಮುಂದುವರಿಯುತ್ತಿತ್ತು.

**ಕೊನೆ ಟಿಪ್ಪಣಿ**

೧. ಪುಟ ೩೩
೨. ಪುಟ ೩೫
೩. ಪುಟ ೧೭೧
೪. ಪುಟ ೧೮೨
೫. ಪುಟ ೧೯೪

## ಅಧ್ಯಾಯ ೫

## ಗೋದಾನ ಕಾದಂಬರಿಯಲ್ಲಿ ಮಾನವ ಸ್ವಭಾವಗಳ ಶೋಧ

ಗೋದಾನ ಕಾದಂಬರಿಯು ತನ್ನ ನಿರೂಪಣೆಯ ವಿಶಾಲ ಭಿತ್ತಿಯಲ್ಲಿ ಹಲವು ಬಗೆಯ ಮಾನವ ಸಂಬಂಧಗಳನ್ನು ಶೋಧಿಸಿದೆ ಹಾಗೂ ನಿರೂಪಿಸಿದೆ. ಇದು ಪಾತ್ರಗಳ ಸಂಭಾಷಣೆಯ ರೂಪದಲ್ಲಿ, ನಿರೂಪಕರ ನಿರೂಪಣೆಯ ಕ್ರಮದಲ್ಲಿ ಹಾಗೂ ಕೆಲವು ಪಾತ್ರಗಳ ಸ್ವಗತದ ವಿನ್ಯಾಸದಲ್ಲಿ ಒಡಮೂಡಿದೆ. ಈ ಬಗೆಯ ಮಾನವ ಸ್ವಭಾವಗಳ ಶೋಧವು ಕಾದಂಬರಿಯೊಳಗಿನ ವ್ಯಕ್ತಿಗಳ ಇಲ್ಲವೆ ಪಾತ್ರಗಳ ಸಾಂದರ್ಭಿಕ ವರ್ತನೆಗಳ ಶೋಧ ಮಾತ್ರವಾಗಿರದೆ; ಅದು ಪರೋಕ್ಷವಾಗಿ ಸಮುದಾಯಗಳ ಪಾರಂಪರಿಕ ಬದುಕಿನ ಹಲವು ನಂಬಿಕೆಗಳನ್ನು, ಅಪೇಕ್ಷೆಗಳನ್ನು, ಹಂಬಲಗಳನ್ನು, ಅನುಮಾನಗಳನ್ನು ಮತ್ತು ಪರೋಕ್ಷ ವಿಧಾನದ ಅಸಹನೆ ಹಾಗೂ ಪ್ರತಿರೋಧಗಳನ್ನು ಒಳಗೊಂಡಿರುವುದನ್ನು ಗುರುತಿಸಬಹುದು. ಕಾದಂಬರಿಯ ಆರಂಭದಲ್ಲೆ ಧನಿಯ ಮತ್ತು ಹೋರಿ ರಾಮರ ನಡುವಿನ ಸಾಮಾನ್ಯ ಸಂಭಾಷಣೆಯಲ್ಲಿ ಈ ಬಗೆಯ ಶೋಧ ಮೊದಲಾಗುತ್ತದೆ. ಹೋರಿರಾಮ ರಾಯಸಾಹೇಬರ ಮನೆಗೆ ಹೊರಟಿರುತ್ತಾನೆ. ಆಗ ತನ್ನ ದೈನಂದಿನ ಅಗತ್ಯ ವಸ್ತುಗಳನ್ನು ಹೋರಿ ಕೇಳುತ್ತಾನೆ. ಅವರಿಬ್ಬರ ಮಾತುಕತೆಯಲ್ಲಿ ೬೦ ವರುಷದ ವರೆಗೆ ಬದುಕದಿರುವ ಒಂದು ಮಾತನ್ನು ಹೋರಿರಾಮ ಹೇಳುತ್ತಾನೆ. ಇದಕ್ಕೆ ಹೆಂಡತಿ ಧನಿಯ 'ಸಾಕು, ಸುಮ್ಮನಿರಿ. ಬಾಯಿಂದ ಏಕೆ ಕೆಟ್ಟ ಮಾತನ್ನಾಡುತ್ತೀರಿ. ನಿಮ್ಮ ಜೊತೆ ಒಳ್ಳೆ ಮಾತಾಡಿದರೂ ನೀವು ಕೆಟ್ಟ ಯೋಚನೆ ಶುರುಮಾಡಿ ಬಿಡುತ್ತೀರಿ'[1] ಎನ್ನುತ್ತಾಳೆ. ಇದು ಸಮುದಾಯಗಳು ಕುಟುಂಬದೊಳಗೆ ಕಟ್ಟಿಕೊಂಡಿದ್ದಂತಹ ಒಂದು ಬಲವಾದ ನಂಬಿಕೆಯನ್ನು ಅನಾವರಣ ಮಾಡುತ್ತಿದೆ. ಅದು ಯಾವುದು ಎಂದರೆ ಮನುಷ್ಯರು ತಮಗೆ ಎದುರಾಗಬಹುದಾದ ಯಾವುದೆ ಅಪಾಯವನ್ನು ಅಥವಾ ಸಾವನ್ನು ಮುಂದಾಗಿಯೇ ಊಹಿಸಬಾರದು, ಅಷ್ಟು ಮಾತ್ರವಲ್ಲ; ಅದನ್ನು ಬಾಯಿಯಿಂದ ಹೇಳಬಾರದು. ಇದು ಅಪಶಕುನ. ಇದು ಕಂಟಕದ ಸೂಚನೆ. ಇದು ಸಮುದಾಯಗಳ ಬಲವಾದ ನಂಬಿಕೆ. ಇಲ್ಲಿ ಮೇಲಿನ ಮಾತು ಧನಿಯಾಳ ಮೂಲಕ ಬಂದಿರಬಹುದು. ಅದು ವೈಯಕ್ತಿಕವಾಗಿ ಧನಿಯಾಳೊಬ್ಬಳ ಸ್ವಭಾವವಾಘಿರದೆ ಅದು ಮತ್ತೊಂದು ಆಯಾಮದಲ್ಲಿ ಸಾಮುದಾಯಿಕ ನಂಬಿಕೆಯೂ ಹಾಗೂ ಅದರ ಸ್ವಭಾವವೂ ಆಗಿದೆ ಎಂಬುದನ್ನು ಗಮನಿಸಬೇಕು. ಸಮಾಜವಾದಿ ಆಶಯಗಳನ್ನು ನಿರೂಪಿಸುತ್ತಿರುವ 'ಗೋದಾನ' ಕಾದಂಬರಿ ಉದ್ದಕ್ಕೂ ಈ ಬಗೆಯ ಹಲವು ನಂಬಿಕೆಗಳನ್ನು ಅನಾವರಣ ಮಾಡುತ್ತಲೆ ಸಾಗಿದೆ.

ಭೋಲಾ ಮತ್ತು ಹೋರಿಯರ ನಡುವಿನ ಮಾತುಕತೆಯಲ್ಲಿ ಹೋರಿಯ ಹೆಂಡತಿ ಧನಿಯ ಭೋಲಾನನ್ನು ಹೊಗಳುತ್ತಾಳೆ. ಭೋಲಾನಿಗೆ ಮೊದಲೇ ಅಮಲೇರಿತ್ತು. ಆಗ ಭೋಲಾ ಹೇಳಿದ. 'ಬೇರೆಯವರ ಸೊಸೆ ಮಗಳನ್ನು ತನ್ನ ಸೊಸೆ ಮಗಳೆಂದು ತಿಳಿಯುವವನೆ ಮನುಷ್ಯ ಎನಿಸಿಕೊಳ್ಳುತ್ತಾನೆ. ಹೆಂಗಸಿನ ಕಡೆ ಕೆಟ್ಟ ನೋಟ ಬೀರುವ

ದುಷ್ಟನನ್ನು ಗುಂಡಿಕ್ಕಿ ಕೊಂದುಬಿಡಬೇಕು'[2]. ಕಾದಂಬರಿಯ ಆರಂಭದ ಭಾಗದಲ್ಲಿ ಪರರ ಹೆಣ್ಣುಗಳನ್ನು ಕೆಟ್ಟ ದೃಷ್ಟಿಯಿಂದ ನೋಡಬಾರದು, ವಕ್ರದೃಷ್ಟಿಯಿಂದ ಗ್ರಹಿಸಬಾರದು ಎಂಬ ಸಾಮಾಜಿಕ ನೀತಿಯೊಂದು ಭೋಲಾನ ಮೂಲಕ ವ್ಯಕ್ತವಾಗುತ್ತಿದೆ. ಹಾಗೆ ನೋಡಿದರೆ ಕಾದಂಬರಿಯ ಉದ್ದಕ್ಕೂ ಬೇರೆಬೇರೆ ಸನ್ನಿವೇಶಗಳಲ್ಲಿ ಈ ಬಗೆಯ ನೈತಿಕೆಯ ಪ್ರತಿಪಾದನೆ ಅಥವಾ ನಿರೂಪಣೆ ಬಂದಿರುವುದನ್ನು ಗಮನಿಸಬಹುದು. ಕುಟುಂಬದೊಳಗೆ ಇರುವಂತಹ ಸೊಸೆಯಂದಿರನ್ನು ಹೇಗೆ ಕಾಣಬೇಕು ಮತ್ತು ಹೇಗೆ ಕಾಣಬಾರದು ಎಂಬುದನ್ನೂ ಕೂಡ ಮೇಲಿನ ಮಾತುಗಳು ವ್ಯಕ್ತಪಡಿಸುತ್ತವೆ. ತಮ್ಮ ತಮ್ಮ ಮರ್ಯಾದೆಯನ್ನು ಮಾತ್ರ ಕಾಪಾಡಿಕೊಳ್ಳುವುದರ ಜೊತೆಗೆ ಬೇರೆಯವರ ಮರ್ಯಾದೆಯನ್ನು ಹಾಗೂ ಆತ್ಮಗೌರವವನ್ನು ಕಾಪಾಡಬೇಕು ಎಂಬ ಕಡೆಗೂ ಕೂಡ ಮೇಲಿನ ಮಾತುಗಳು ಆಸಕ್ತಿ ತೋರಿಸುತ್ತಿವೆ. ಈ ಮೂಲಕ ಮೇಲಿನ ಸಂಭಾಷಣೆಯು ಒಂದು ಕಡೆ ಒಂದು ಬಗೆಯ ಮೌಲ್ಯಪ್ರತಿಪಾದನೆ ಮಾಡಿದರೆ ಮತ್ತೊಂದು ಕಡೆಯಲ್ಲಿ ಅದು ವ್ಯಕ್ತಿಗಳ ಸೂಕ್ಷ್ಮ ಸ್ವಭಾವವನ್ನೂ ಶೋಧನೆ ಮಾಡುತ್ತಿದೆ.

ಭೋಲಾನು ತನಗೆ ದುಡ್ಡು ಕೊಡದೆ ತನ್ನ ಹಸುವನ್ನು ಹೋರಿಯು ಹೊಡೆದುಕೊಂಡು ಹೋಗಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. ಆದರೆ ರೈತನಾದ ಹೋರಿಗೆ ಇದು ಇಷ್ಟವಾಗುವುದಿಲ್ಲ. ಇದು ಯಾಕೆ ಇಷ್ಟವಾಗುವುದಿಲ್ಲ ಎಂಬುದನ್ನು ಕಾದಂಬರಿಯ ಒಂದೇ ಒಂದು ವಾಕ್ಯ ಈ ಮುಂದಿನಂತೆ ನಿರೂಪಿಸಿದೆ. 'ಹೋರಿ ಒಬ್ಬ ರೈತ. ಯಾರದೊ ಉರಿಯುತ್ತಿರುವ ಮನೆಯಲ್ಲಿ ಕೈ ಕಾಯಿಸಿಕೊಳ್ಳುವುದನ್ನು ಅವನು ಕಲಿತಿರಲಿಲ್ಲ'[3] ಈ ಸಾಲು ಬಹಳ ಮುಖ್ಯವಾದುದು. ಯಾಕೆಂದರೆ ಇದು ಒಂದು ಕಡೆ ಹೋರಿಯ ಇಡೀ ವ್ಯಕ್ತಿತ್ವವನ್ನು, ಅವನ ಆತ್ಮಗೌರವವನ್ನು, ಅವನ ಸ್ವಾಭಿಮಾನವನ್ನು, ಅವನ ಮುಗ್ಧತೆಯನ್ನು ವ್ಯಕ್ತಪಡಿಸುತ್ತಿದೆ. ಅದರ ಜೊತೆಗೆ ಇನ್ನೊಂದು ಬಹಳ ಮುಖ್ಯವಾದ ಅಂಶವನ್ನು ಮೇಲಿನ ಸಾಲು ಪರೋಕ್ಷ ವಿಧಾನದಲ್ಲಿ ನಿರೂಪಿಸುತ್ತಿದೆ. ಅದು ಯಾವುದು ಎಂದರೆ ರೈತರಾದವರು ಬೇರೆಯವರ ಉರಿಯುತ್ತಿರುವ ಮನೆಯಲ್ಲಿ ಕೈ ಕಾಯಿಸಿಕೊಳ್ಳುವವರಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಹೋರಿಯಂತಹ ರೈತರು ಬೇರೆಯವರನ್ನು ಶೋಷಣೆ ಮಾಡಿಯೊ, ಅಥವಾ ಬೇರೆಯವರ ಕಷ್ಟಗಳನ್ನು ದುರುಪಯೋಗ ಪಡಿಸಿಕೊಂಡೋ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವವನಲ್ಲ. ಹಾಗೆ ಮಾಡುವವರು ಜಮೀನುದಾರರು ಮತ್ತು ಮೇಲುವರ್ಗದವರು. ಇದು ಮೇಲುವರ್ಗದವರನ್ನು ಉಲ್ಲೇಖ ಮಾಡದೆ ಅವರ ಸ್ವಭಾವವನ್ನು ಪರೋಕ್ಷವಾಗಿ ಬಯಲು ಮಾಡುತ್ತಿದೆ.

ಕಾದಂಬರಿಯ ಮುಖ್ಯ ಪಾತ್ರವಾದ ಹೋರಿ ರಾಮ ಒಬ್ಬ ಸಾಮಾನ್ಯ ಗೇಣಿದಾರ. ಅವನಿಗೆ ವೈಯಕ್ತಿಕವಾಗಿ ಹಾಗೂ ಕೌಟುಂಬಿಕವಾಗಿ ಸಾಕಷ್ಟು ಸಮಸ್ಯೆಗಳು, ತೊಂದರೆಗಳು ಇದ್ದವು. ಆದರೆ ಇಂತಹ ಸಮಸ್ಯೆಗಳ ಎದುರಿನಲ್ಲೇ ಜಮೀನುದಾರನಾದ ರಾಯಸಾಹೇಬ ಅಮರಪಾಲ ಸಿಂಹನು ತನ್ನ ಸಂಕಟ ಹಾಗೂ ಸಮಸ್ಯೆಯನ್ನು

ಗೇಣಿದಾರನಾದ ಹೋರಿ ರಾಮನಲ್ಲಿ ಈ ರೀತಿ ಹೇಳಿಕೊಳ್ಳುತ್ತಾನೆ. 'ನೀನು ಯೋಚಿಸುತ್ತಿರಬಹುದು. ನನ್ನಂತಹ ಕೆಲಸಕ್ಕೆ ಬಾರದವನ ಹತ್ತಿರ ಯಜಮಾನರು ತಮ್ಮ ದುಃಖ ತೋಡಿಕೊಳ್ಳುತ್ತಿದ್ದಾರಲ್ಲ ಎಂದು. ನನ್ನ ಮನಸ್ಸನ್ನು ಇನ್ಯಾರ ಹತ್ತಿರ ತೆರೆದಿಡಲಿ? ಅದೇಕೊ ಏನೊ ನಿನ್ನ ಬಗ್ಗೆ ನನಗೆ ನಂಬಿಕೆ ಇದೆ. ನೀನು ಖಂಡಿತ ನಿನ್ನ ಮನಸ್ಸಿನಲ್ಲಿ ನನ್ನ ಬಗ್ಗೆ ನಗುವುದಿಲ್ಲ ಎನ್ನುವುದು ನನಗೆ ಗೊತ್ತಿದೆ. ಒಂದು ವೇಳೆ ನಕ್ಕರೂ ನಾನು ನಿನ್ನ ನಗುವನ್ನು ಸಹಿಸಬಲ್ಲೆ. ನನ್ನ ಸರಿಸಮಾನರಾದ ನಗುವನ್ನು ಸಹಿಸುವುದು ನನಗೆ ಸಾಧ್ಯವಿಲ್ಲ. ಸಂಪತ್ತು ಸಹೃದಯತೆ ಒಟ್ಟಿಗಿರಲು ಸಾಧ್ಯವಿಲ್ಲ. ನಾನು ದಾನ ಕೊಡುತ್ತೇನೆ. ಧರ್ಮ ಮಾಡುತ್ತೇನೆ. ಏಕೆ ಎನ್ನುವುದು ನಿನಗೆ ಗೊತ್ತಾ? ನನ್ನ ಸರಿಸಮಾನರಾದವರು ನನಗಿಂತ ಕೀಳು ಎಂದು ತೋರಿಸಲು ಮಾತ್ರ, ನನ್ನ ದಾನ ಹಾಗೂ ಧರ್ಮ ಕೇವಲ ಅಹಂಕಾರ, ವಿಶುದ್ಧ ಅಹಂಕಾರ. ನಾನು ಹೆಂಡ ಕುಡಿಯದಿದ್ದರೆ ಅದು ನನ್ನ ಜಿಪುಣತನ. ನಾನು ಹೆಂಡ ಕುಡಿಯಲು ಶುರುಮಾಡಿದರೆ ಅದು ಪ್ರಜೆಗಳ ರಕ್ತವಾಗುತ್ತದೆ. ನಾನು ವಿಲಾಸಿತೆಯಲ್ಲಿ ಮುಳುಗದಿದ್ದರೆ ನಾನು ಅರಸಿಕ. ವಿಲಾಸತೆಯಲ್ಲಿ ತೊಡಗಿದರೆ ಮತ್ತೆ ಹೇಳುವುದೇನಿದೆ!'[9] ಕಾದಂಬರಿ ಕೇವಲ ಕಪ್ಪು ಬಿಳುಪು ಮಾದರಿಯಲ್ಲಿ ಗೇಣಿದಾರರು ಮಾತ್ರ ಸಂಕಟ ಹಾಗೂ ಸಮಸ್ಯೆಗಳನ್ನು ಎದುರಿಸುತ್ತಿರುತ್ತಾರೆ. ಆದರೆ ಜಮೀನುದಾರರಾರಿಗೆ ಯಾವುದೆ ಸಂಕಟ ಹಾಗೂ ಸಮಸ್ಯೆಗಳು ಇರುವುದಿಲ್ಲ ಎಂಬ ಯಾಂತ್ರಿಕ ಗ್ರಹಿಕೆಯನ್ನು ಬುಡಮೇಲು ಮಾಡುತ್ತಿದೆ. ಈ ಕ್ರಮವು ರಾಯಸಾಹೇಬನ ಪಾತ್ರದ ಮೂಲಕ ಪರಿಣಾಮಕಾರಿಯಾಗಿ ನಿರೂಪಿಸಿದೆ. ಅಂದರೆ ಶ್ರೀಮಂತರಿಗೂ ಇರಬಹುದಾದ ಸಂಕಟ ಹಾಗೂ ಸಮಸ್ಯೆಯ ಮುಖಗಳನ್ನು, ಅವರಿಗಿರುವ ಒತ್ತಡ ಹಾಗೂ ಪ್ರತಿಷ್ಠೆಯ ಹಿಂದಿನ ತೋರಿಕೆಯ ಬದುಕಿನ ಡೋಲಾಯಮಾನ ಪರಿಸ್ಥಿತಿಯನ್ನು ಅತ್ಯಂತ ಸೂಕ್ಷ್ಮವಾಗಿ ತೆರೆದಿಟ್ಟಿದೆ. ಒಂದು ಕಡೆ ಶ್ರೀಮಂತರು ಮೋಜು ಮಾಡದಿದ್ದರೆ, ಅತಿಯಾಗಿ ಖರ್ಚು ಮಾಡದಿದ್ದರೆ ಅವರನ್ನು ಜಿಪುಣರು ಎಂದು, ವಿಲಾಸಿಗಳು ಎಂದು ತೆಗಳಲಾಗುತ್ತದೆ. ಒಂದು ವೇಳೆ ಅವರು ವಿಲಾಸಿ ಜೀವನ ಮಾಡಿದರೆ ಅದು ಶ್ರಮಜೀವಿಗಳ ಹಾಗೂ ಬಡವರ ಮೇಲಿನ ಶೋಷಣೆಯ ಹಣ ಎಂದು ವ್ಯಾಖ್ಯಾನಿಸಲಾಗುತ್ತದೆ. ಒಂದು ಕಡೆ ಶ್ರೀಮಂತರು ಬಡವರನ್ನು ಶೋಷಣೆ ಮಾಡಿದರೆ, ಮತ್ತೊಂದು ಕಡೆ ಶ್ರೀಮಂತ ಶ್ರೀಮಂತರ ನಡುವಿನ ಪರಸ್ಪರ ಪೈಪೋಟಿಯಲ್ಲಿ ಅವರು ತಮಗೇ ತಿಳಿಯದಂತೆ ತೆಳುವಾಗಿ ನಲುಗಿ ಹೋಗಿರುತ್ತಾರೆ ಎಂಬುದನ್ನೂ ಮೇಲಿನ ಸಾಲುಗಳು ಹೇಳುತ್ತಿವೆ. ಕೆಲವೊಮ್ಮೆ ಶ್ರೀಮಂತರು ತಮಗೆ ಯಾವುದೇ ರೂಪದ ಸಮಸ್ಯೆ ಇದ್ದಾಗಲೂ ಅದರ ವಾಸ್ತವವನ್ನು ಮುಚ್ಚಿಟ್ಟುಕೊಂಡು, ಅದರ ಪ್ರತಿಷ್ಠೆಯ ಮುಖವಾಡವನ್ನು ಧರಿಸಿ ಬದುಕಬೇಕಾಗುತ್ತದೆ ಎಂಬುದನ್ನೂ ಮೇಲಿನ ಸಾಲುಗಳು ವ್ಯಕ್ತಪಡಿಸುತ್ತಿವೆ. ಕಾದಂಬರಿ ಇಲ್ಲಿಗೇ ತನ್ನ ಸೂಕ್ಷ್ಮನೋಟವನ್ನು ನಿಲ್ಲಿಸುವುದಿಲ್ಲ. ರಾಯಸಾಹೇಬನ ಮಾತುಗಳನ್ನು ತನ್ನ ಅಪೇಕ್ಷೆ ಹಾಗೂ ಆಯ್ಕೆಯನ್ನೂ ಮೀರಿ ಕೇಳಿಸಿಕೊಂಡಾದ ಮೇಲೆ ಹೋರಿಯ ಮನಸ್ಸಿನಲ್ಲಿ

ಯಾವ ಭಾವನೆಗಳು ಮೂಡಿದವು ಎಂಬುದನ್ನು ತುಂಬ ಪರಿಣಾಮಕಾರಿಯಾಗಿ ಚಿತ್ರಿಸಿದೆ. 'ನಾವು ತಿಳಿದಿದ್ದೇನೆಂದರೆ ಇವೆಲ್ಲ ನಮ್ಮಲ್ಲಿ ಮಾತ್ರ ಇದೆ ಎಂದು. ಆದರೆ ದೊಡ್ಡದೊಡ್ಡವರಲ್ಲಿಯೂ ಇದು ಮನೆ ಮಾಡಿಕೊಂಡಿದೆ ಎನ್ನುವ ವಿಷಯ ಈಗ ತಾನೆ ನನಗೆ ತಿಳಿಯಿತು'[೫೬]. ಮುಂದುವರಿದು ರಾಯಸಾಹೇಬ ಹೋರಿ ರಾಮನಲ್ಲಿ ಹೀಗೆ ಹೇಳಿದ. 'ನೀನು ನಾವು ದೊಡ್ಡ ಮನುಷ್ಯರು ಎಂದು ತಿಳಿದಿದ್ದೀಯೆ. ನಮ್ಮ ಹೆಸರೇನೊ ದೊಡ್ಡದೆ. ಆದರೆ ನಮ್ಮ ಹುಳುಕುಗಳು ನಮಗೆ ಗೊತ್ತು. ಗರೀಬರಲ್ಲಿರುವ ಹೊಟ್ಟೆಕಿಚ್ಚು ಅಥವಾ ದ್ವೇಷ ಸ್ವಾರ್ಥಕ್ಕಾಗಿ ಅಥವಾ ಹೊಟ್ಟೆಪಾಡಿಗಾಗಿ. ಇಂತಹ ಈರ್ಷ್ಯೆ ಅಥವಾ ದ್ವೇಷ ನನ್ನ ದೃಷ್ಟಿಯಲ್ಲಿ ಕ್ಷಮ್ಯ. ನಮ್ಮ ಬಾಯಲ್ಲಿನ ತುತ್ತನ್ನು ಯಾರಾದರೂ ಕಿತ್ತುಕೊಂಡರೆ ಅವನ ಬಾಯಿಗೆ ಬೆರಳು ಹಾಕಿ ತೆಗೆದುಕೊಳ್ಳುವುದು ನಮ್ಮ ಧರ್ಮ. ನಾವೇನಾದರೂ ಹೀಗೆ ಮಾಡದೆ ಸುಮ್ಮನಾದರೆ ನಾವು ದೇವತೆಗಳು. ದೊಡ್ಡ ಮನುಷ್ಯರ ಈರ್ಷ್ಯೆ ಹಾಗೂ ದ್ವೇಷ ಕೇವಲ ಖುಷಿಗಾಗಿ. ನಾವು ಎಷ್ಟು ದೊಡ್ಡವರಾಗಿದ್ದೇವೆ ಎಂದರೆ ನಮಗೆ ನೀಚತೆ ಹಾಗೂ ಕುಟಿಲತೆಯಲ್ಲೆ ಸ್ವಾರ್ಥತೆ ಹಾಗೂ ಪರಮ ಆನಂದ ಸಿಗುತ್ತದೆ. ನಾವು ಎಂತಹ ಮಟ್ಟಕ್ಕೆ ಏರಿಬಿಟ್ಟಿದ್ದೇವೆಂದರೆ ಬೇರೆಯವರು ಅಳುವುದನ್ನು ನೋಡಿ ನಗುತ್ತೇವೆ. ಇದನ್ನು ನೀನು ಸಣ್ಣ ಸಾಧನೆ ಎಂದು ತಿಳಿಯಬೇಡ'[೫೭]. ಶ್ರೀಮಂತರ ಡೋಂಗಿತನವನ್ನು, ಅವರ ಕುಟಿಲತೆಯನ್ನು, ಅವರ ಹಿಂಸಾ ಪ್ರವೃತ್ತಿಯನ್ನು ಕೆಳವರ್ಗದ ಪಾತ್ರದ ಮೂಲಕ ಅನಾವರಣ ಮಾಡುವುದು ಒಂದು ಕ್ರಮ. ಆದರೆ ಇದಕ್ಕೆ ವಿರುದ್ಧವಾಗಿ 'ಗೋದಾನ' ಕಾದಂಬರಿ ಶ್ರೀಮಂತ ವರ್ಗದ ಪಾತ್ರದ ಮೂಲಕವೇ ಆ ವರ್ಗದವರ ನೀಚತನವನ್ನು ಮತ್ತು ಅವರ ಹಿಂಸಾ ಪ್ರವೃತ್ತಿಯನ್ನು, ಅವರ ಸ್ವಾರ್ಥವನ್ನು ಅನಾವರಣ ಮಾಡಿದೆ. ಆದರೆ ಇದು ಎಲ್ಲಯೂ ಕೂಡ ಆತ್ಮ ವಿಮರ್ಶೆ ಎಂಬ ವಿಧಾನದಲ್ಲಿ, ಒಂದು ಬಗೆಯ ಹಪಾಹಪಿಯಲ್ಲಿ ನಿರೂಪಿತವಾಗಿಲ್ಲ. ಈ ಮೂಲಕ ಆತ್ಮ ವಿಮರ್ಶೆ ಎಂಬುದು ಶೋಷಕ ವರ್ಗಕ್ಕೆ ಅಷ್ಟು ಸುಲಭಕ್ಕೆ ಸಾಧ್ಯವೆ ಎಂಬ ಅನುಮಾನವನ್ನೂ ಇದು ಪರೋಕ್ಷವಾಗಿ ಸೂಚಿಸುವಂತಿದೆ. ಹಾಗಾಗಿ ಆ ವರ್ಗಕ್ಕೆ ಇರಬಹುದಾದ ಒಂದು ಬಗೆಯ ಭೌತಿಕ ಅನಿವಾರ್ಯದ ಸ್ಥಿತಿಯನ್ನು ನಿರೂಪಿಸಲು ಪ್ರಯತ್ನಿಸಿದೆ. ಅದೂ ರಾಯಸಾಹೇಬ ಈ ಮಾತುಗಳನ್ನು ಗೇಣಿದಾರನಾದ ಹೋರಿಯ ಎದುರು ಹೇಳುತ್ತಿರುವುದು ಆ ಮಾತುಗಳಿಗೆ ಇನ್ನಿಲ್ಲದ ಶಕ್ತಿಯನ್ನು ತಂದಿದೆ.

ರಾಯಸಾಹೇಬ ಕೂಲಿ ಕೊಡದೆ ದುಡಿಸಿಕೊಳ್ಳುತ್ತಿದ್ದ. ಒಂದು ಪ್ರಸಂಗದಲ್ಲಿ ಕೂಲಿ ಕೆಲಸ ಮಾಡುವವರು ಹೊಟ್ಟೆಗೆ ಬೇಕೆಂದು ಕೇಳಿ, ಅವರು ಮಾಡುತ್ತಿದ್ದ ಕೆಲಸವನ್ನು ನಿಲ್ಲಿಸಿದರು. ಈ ವಿಷಯವನ್ನು ಕೇಳಿ, ರಾಯಸಾಹೇಬನು ಕೆಂಗಣ್ಣು ಮಾಡಿಕೊಂಡು, 'ನಾವು ಎಂದೂ ಹೊಟ್ಟೆಗೆ ಕೊಡದಿರುವಾಗ ಇಂದು ಈ ಹೊಸ ವಿಷಯವೇಕೆ' ಎಂದು ಬೈಯ್ಗುಳದ ಮಳೆಗರೆಯುವನು. ಇದನ್ನು ಅದೇ ಸಮಯದಲ್ಲಿ ಗಮನಿಸುತ್ತಿದ್ದ ಹೋರಿ ರಾಮನು 'ನೀತಿ ಹಾಗೂ ಧರ್ಮದ ಮಾತುಗಳು ಕೇವಲ

ಮಾತಿಗಲ್ಲದೆ ಕಾರ್ಯಕಲ್ಲ' ಎಂಬುದನ್ನು ರಾಯಸಾಹೇಬನ ವರ್ತನೆಯಿಂದ ತಿಳಿದುಕೊಂಡನು. ಶ್ರೀಮಂತರ ಈ ಬಗೆಯ ಆತ್ಮಾವಲೋಕನದ ಮಾತುಗಳು ಕೇವಲ ಸಂದರ್ಭ ಪ್ರೇರಣೆಯಿಂದ ಹುಟ್ಟುತ್ತವೆಯೇ ಹೊರತು ನಿಜವಾದ ಮಾನವ ಪ್ರೇಮದಿಂದ ಹುಟ್ಟುವುದಿಲ್ಲ ಎಂಬುದು ಹೋರಿಗೆ ಗೋಚರವಾಗುತ್ತದೆ.

ಕಾದಂಬರಿಯು ಬೇರೆ ಬೇರೆ ಸ್ತರದ ಹಾಗೂ ಬೇರೆಬೇರೆ ವ್ಯಕ್ತಿಗಳ ಸ್ವಭಾವಗಳನ್ನು ಶೋಧಿಸುತ್ತ ಹೋಗುತ್ತದೆ. ದಿನನಿತ್ಯ ಹೊಟ್ಟೆಪಾಡಿಗಾಗಿ ದುಡಿಯುವ ಜನರು ಅವರು ಮಾಡುವ ಕೆಲಸದಲ್ಲಿ ಎಷ್ಟರಮಟ್ಟಿಗೆ ಮಗ್ನರಾಗುತ್ತಿದ್ದರು ಅಥವಾ ಎಷ್ಟರಮಟ್ಟಿಗೆ ಮಗ್ನರಾಗುತ್ತಿರಲಿಲ್ಲ ಎಂಬುದನ್ನು ಈ ಮುಂದಿನಂತೆ ನಿರೂಪಿಸಿದೆ. 'ಹೊಲದಲ್ಲಿ ಕೆಲಸ ಮಾಡುತ್ತಿದ್ದ ಗೋಬರನ ಮುಖದಲ್ಲಿ ಪ್ರಸನ್ನತೆ ಇರಲಿಲ್ಲ. ಆದರೆ ಅಲ್ಲಿ ಅಸಂತೋಷ ಹಾಗೂ ವಿರೋಧ ಎದ್ದು ಕಾಣುತ್ತಿತ್ತು. ತನಗೆ ಊಟದ ಚಿಂತೆಯಿಲ್ಲ ಎಂದು ತೋರಿಸಿಕೊಳ್ಳುವುದಕ್ಕಾಗಿ ಅವನು ಕೆಲಸದಲ್ಲಿ ತೊಡಗಿಸಿಕೊಂಡಿದ್ದ'[೭]. ಮೇಲಿನ ಉಲ್ಲೇಖದಲ್ಲಿ ಎರಡು ಮುಖ್ಯವಾದ ಅಂಶಗಳಿವೆ. ಗೋಬರನ ವಿರೋಧ, ಅವನ ಅಸಂತೋಷ ಮತ್ತು ಕೆಲಸದಲ್ಲಿ ಆತನ ನಟನೆಯು ತನ್ನ ತಂದೆಯ ಬಗೆಗಿನ ಅಸಮಾಧಾನವನ್ನೂ ಮತ್ತು ಆತನ ತಂದೆ ಹಾಗೂ ಶ್ರೀಮಂತರ ನಡುವಿನ ಸಂಬಂಧವನ್ನು ವಿರೋಧಿಸುವಂತಹ ನೆಲೆಯದಾಗಿತ್ತು.

ಹೋರಿ ರಾಮನು ಭೋಲಾನಿಂದ ಒಂದು ಹಸುವನ್ನು ತರುವವನಿದ್ದ. ಆ ಸಮಯದಲ್ಲಿ ಆತ ಈ ವಿಷಯವನ್ನು ತನ್ನ ಹೆಂಡತಿ ಧನಿಯಳಿಗೆ ಹೇಳದೆ ಇದ್ದರೆ, ಅದನ್ನು ತಂದ ಮೇಲೆ ಹೇಳಿದರೆ ಏನಾಗಬಹುದು ಎಂಬುದಾಗಿ ತನ್ನೊಳಗೆ ಕಲ್ಪಿಸಿಕೊಂಡನು. ಆ ಮೂಲಕ ತನ್ನ ಹೆಂಡತಿಯ ಪ್ರತಿಕ್ರಿಯೆ ಹಾಗೂ ಸಂತೋಷದ ಭಾವನೆಗಳು ಹೇಗಿರಬಹುದು ಎಂಬುದನ್ನು ಬಹಳ ಮುಂದಾಗಿಯೇ ಆತ ಊಹಿಸಿಕೊಂಡು ಈ ಮುಂದಿನಂತೆ ತನ್ನೊಳಗೇ ಅಂದುಕೊಂಡನು. 'ನಾನು ಧನಿಯಾಗೆ ಹೇಳಲೇಬಾರದಿತ್ತು. ಸುಳಿವೇ ಕೊಡದೆ ತಂದು ಕಟ್ಟಿದ್ದರೆ ಅವಳಿಗೆ ಬಹಳ ಆಶ್ಚರ್ಯವಾಗುತಿತ್ತು. ಕೇಳಲು ಶುರುಮಾಡುತ್ತಿದ್ದಳು. ಯಾರ ಹಸು? ಎಲ್ಲಿಂದ ತಂದಿರಿ? ಚೆನ್ನಾಗಿ ಅವಳನ್ನು ಆಟವಾಡಿಸಿ ನಂತರ ಹೇಳಬಹುದಿತ್ತು. ಆದರೆ ಮಾತು ಮುಚ್ಚಿಡುವುದು ಬರಬೇಕಲ್ಲ! ಒಂದೆರಡು ಕಾಸು ಹೆಚ್ಚಾಗಿ ಬಂದರೂ ಅದನ್ನು ನಾನು ಮುಚ್ಚಿಡಲಾರೆ'[೮]. ಮೇಲಿನ ಮಾತುಗಳು ಒಂದು ಕಡೆ ಹೋರಿ ರಾಮನ ಮುಗ್ಧತೆಯನ್ನೂ, ಆತನ ತೆರೆದ ಮನಸ್ಸನ್ನೂ ಮತ್ತೊಂದು ಕಡೆ ಆ ಮೂಲಕ ಧನಿಯಳ ಸ್ವಭಾವ ಎಂತಹದ್ದು ಎಂಬುದನ್ನು ಕಲ್ಪಿಸಿಕೊಳ್ಳುವ ವಿಧಾನ ನಿರೂಪಣೆಯ ತಂತ್ರದ ದೃಷ್ಟಿಯಿಂದ ಅತ್ಯಂತ ಮಹತ್ವದ್ದು. ಅಂದರೆ ತನ್ನೊಳಗೆ ಅಂದುಕೊಳ್ಳುವ ಮೂಲಕ ಇಬ್ಬರ ಸ್ವಭಾವವೂ ಏಕಕಾಲಕ್ಕೆ ಅನಾವರಣಗೊಳ್ಳುತ್ತದೆ. ಇಂತಹ ಸೂಕ್ಷ್ಮ ಸನ್ನಿವೇಶಗಳನ್ನು 'ಗೋದಾನ'ವು ತನ್ನ ನಿರೂಪಣೆಯ ಸಾಧ್ಯತೆಗಳಲ್ಲಿ ಅಲ್ಲಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸುತ್ತಲೆ ಸಾಗಿದೆ.

ಹೋರಿಯು ತನ್ನ ಬಿದಿರು ಗಳಗಳನ್ನು ಇಡಿಯಾಗಿ ೨೦ ರೂಪಾಯಿಗೆ ಚೌಧರಿಗೆ ಮಾರುತ್ತಾನೆ. ಇದು ಮೊದಲು ಗೊತ್ತಿರದೆ ಇದ್ದ ತನ್ನ ತಮ್ಮನಾದ ಹೀರಾನ ಹೆಂಡತಿ ಪುನ್ನಿಯು ಅಲ್ಲಿಗೆ ಬಂದು ಅದನ್ನು ವಿರೋಧಿಸುತ್ತಾಳೆ. ಆಗ ಪ್ರತಿಯಾಗಿ ಚೌಧರಿ ಕೂಡ ಜಗಳಕ್ಕೆ ಇಳಿಯುತ್ತಾನೆ. ಈ ಜಗಳನ್ನು ಕೇಳಿ ಮಧ್ಯದಲ್ಲಿ ಹೋರಿ ಬರುತ್ತಾನೆ. ಪುನ್ನಿಯ ಅಳುವನ್ನು ಕಂಡು ಹೋರಿ ರಾಮನ ರಕ್ತ ಸಂಬಂಧ ಪುಟಿದೆದ್ದಿತು. ಅದು ಆಸ್ತಿ ಹಂಚಿಕೆಯ ಕಟ್ಟೆಯನ್ನು ಒಡೆದು ಎಲ್ಲವನ್ನೂ ತನ್ನಲ್ಲಿ ಒಡಗೂಡಿಸಿಕೊಳ್ಳಲು ಹೊರಗೆ ಬಂದು, ಚೌಧರಿಗೆ ಜೋರಾಗಿ ಒಂದು ಪೆಟ್ಟು ಹೊಡೆದು ಹೇಳಿದನು. 'ಚೌಧರಿ ನಿನಗೆ ಒಳ್ಳೆಯದಾಗಬೇಕು ಎಂದುಕೊಂಡಿದ್ದರೆ ಇಲ್ಲಿಂದ ಹೊರಟು ಹೋಗು. ಇಲ್ಲವಾದರೆ ನಿನ್ನ ಹೆಣ ಬೀಳುತ್ತದೆ'[೯] ಎಂದು ಗುಡುಗಿದನು. ವಿಶಾಲವಾದ ಕಾದಂಬರಿಯ ಭಿತ್ತಿಯಲ್ಲಿ ಹೋರಿ ರಾಮನು ಎಲ್ಲಿಯೂ, ಏನು ಬಂದರೂ ಪ್ರತಿಕ್ರಿಯಿಸದೆ, ಎಲ್ಲವನ್ನೂ ಸಹಿಸಿಕೊಳ್ಳುವಂತಹವನು ಮೇಲಿನ ಪ್ರಸಂಗದಲ್ಲಿ ಮಾತ್ರ ಸೆಟೆದು ನಿಲ್ಲುವುದು ಆಶ್ಚರ್ಯವೂ ಮತ್ತು ಕುತೂಹಲವೂ ಆದ ಪ್ರಸಂಗವನ್ನು ನಿರ್ಮಾಣ ಮಾಡಿದೆ. ಯಾಕೆ ಇಲ್ಲಿ ಮಾತ್ರ ಅಷ್ಟು ಗಂಭೀರವಾಗಿ ಸಿಟ್ಟಿಗೆದ್ದ, ಬೇರೆ ಕಡೆಯಲ್ಲಿ ತನ್ನ ಹಸು ಹೋದಾಗ, ತನ್ನ ಜಮೀನು ಹೋದಾಗ, ತನ್ನ ಮನೆಗೆ ಸಮಾಜ ಒಪ್ಪದ ರೀತಿಯಲ್ಲಿ ಜುನಿಯ ಬಂದಾಗ ಸಿಟ್ಟಿಗೇಳದ, ಏನೊಂದೂ ಮಾತಾಡದ ಹೋರಿ ರಾಮ ಈ ಪ್ರಸಂಗದಲ್ಲಿ ಮಾತ್ರ ಆಕ್ರೋಶಗೊಂಡ ಎಂಬ ಪ್ರಶ್ನೆ ಏಳುತ್ತದೆ. ಇದು ರಕ್ತ ಸಂಬಂಧವು ಎಂತಹವರನ್ನೂ ಕೂಡ ಸಿಟ್ಟಿಗೇಳಿಸುತ್ತದೆ ಮತ್ತು ಒಟ್ಟುಗೂಡಿಸುತ್ತದೆ ಎಂಬ ಕುಲ ಸಹಜವಾದ ಮಾನವ ಸ್ವಭಾವವನ್ನು ಎತ್ತಿಹಿಡಿದೆ. ಕಾದಂಬರಿಯ ಮತ್ತೊಂದು ಭಾಗದಲ್ಲಿ ಹೋರಿಯ ತಮ್ಮನಾದ ಹೀರಾನಿಗೆ ದಂಡ ಹಾಕಿಸುವ ಪ್ರಸಂಗ ನಿರ್ಮಾಣವಾಗುತ್ತದೆ. ಇದು ಸ್ವತಃ ಹೀರಾನಿಗಿಂತಲೂ ಹೋರಿಗೆ ತೀವ್ರವಾದ ಆತಂಕವನ್ನೂ, ಅಪಮಾನವನ್ನೂ ಉಂಟುಮಾಡುತ್ತದೆ. ಇದನ್ನು ಹೋರಿಯ ಮಾತುಗಳಲ್ಲೇ ಉಲ್ಲೇಖಿಸುವುದಾದರೆ 'ಅವನ ಮನೆ ಜಪ್ತಿಯಾದರೂ ಒಂದೆ. ನನ್ನ ಮನೆ ಜಪ್ತಿಯಾದರೂ ಒಂದೆ. ಹೀರಾ ಬೇರೆ ಇರಬಹುದು. ಅವನ ಸ್ವಭಾವ ಬೇರೆಯಾಗಿರಬಹುದು. ಆದರೆ ಇಡೀ ಜಗತ್ತಿಗೆ ಗೊತ್ತಿದೆಯಲ್ಲವೆ? ಅವನು ನನ್ನ ತಮ್ಮ ಎನ್ನುವುದು'[೧೦] ಈ ರಕ್ತ ಸಂಬಂಧದ ಸೂಕ್ಷ್ಮ ಎಳೆಯನ್ನು ಇಡೀ ಕನ್ನಡ ಸಾಹಿತ್ಯದ ಕೆಲವು ಪಠ್ಯಗಳು ಮೇಲಿಂದ ಮೇಲೆ ನಿರೂಪಿಸುತ್ತ ಬಂದಿವೆ. 'ರಕ್ತಕ್ಕೆ ಸೆಪ್ಪಿರುತ್ತದೆ' ಎಂಬ ಬಹಳ ಮುಖ್ಯವಾದ ಅಂಶವನ್ನು ದೇವನೂರು ಮಹಾದೇವ ಅವರ ಕುಸುಮಬಾಲೆ ಇದನ್ನು ಮತ್ತೊಂದು ಆಯಾಮದಲ್ಲಿ ನಿರೂಪಿಸಿದೆ. ಕುಸುಮಳನ್ನು ಪ್ರೇಮಿಸಿದ ಕಾರಣಕ್ಕೆ ಕೊಲೆಯಾಗಿ ಹೋಗಿರುವ ಚೆನ್ನ ಇವತ್ತಲ್ಲ ನಾಳೆ ಬಂದೇ ಬರುತ್ತಾನೆ ಎಂಬುದಾಗಿ ಚೆನ್ನನ ತಂದೆ ತಾಯಿಗಳು ಹಲಬುತ್ತಾ ಕೂತಿರುತ್ತಾರೆ. ವಡ್ಡಾರಾಧನೆಯ ಕಥೆಗಳಲ್ಲೂ ಈ ಬಗೆಯ ರಕ್ತದ ನೆನಪಿನ ಆಯಾಮಗಳು ಬರುತ್ತವೆ. 'ಸುಕುಮಾರಸ್ವಾಮಿ ಕಥೆ'ಯಲ್ಲಿ ವಾಯುಭೂತಿಯು ಭಟಾರರನ್ನು ಗರ್ವದಿಂದ

ತಿರಸ್ಕರಿಸಿ ಬೈದುದರ ಪಾಪದ ಫಲವಾಗಿ ಏಳು ದಿನಗಳೊಳಗೆ ಕುಷ್ಠರೋಗಕ್ಕೆ ಈಡಾಗಿ, ಹುಳು ಹಿಡಿದು ಸತ್ತು, ಹೆಣ್ಣು ಕತ್ತೆಯಾಗಿ, ಹೆಣ್ಣು ಹಂದಿಯಾಗಿ, ಹೆಣ್ಣು ನಾಯಿಯಾಗಿ ಬೇರೆಬೇರೆ ಜನ್ಮಗಳಲ್ಲಿ ಹುಟ್ಟಿ ಸತ್ತು, ಹೊಲೆಯರ ಮನೆಯಲ್ಲಿ ಹುಟ್ಟು ಕುರುಡಿಯಾಗಿ ಹುಟ್ಟಿರುತ್ತಾಳೆ. ಅವಳು ಉದ್ಯಾನದಲ್ಲಿ ನೇರಿಳೆ ಹಣ್ಣುಗಳನ್ನು ಆಯ್ದು ತಿನ್ನುತ್ತಿರುವುದನ್ನು ನೋಡಿ, ಅಗ್ನಿಭೂತಿಗೆ ಕರುಣೆ ಉಂಟಾಗುತ್ತದೆ. ಬೇರೊಂದು ಸನ್ನಿವೇಶದಲ್ಲಿ ಇವಳು ಸೋಮಶರ್ಮನ ಮಗಳು ನಾಗಶ್ರೀಯಾಗಿ ಹುಟ್ಟುತ್ತಾಳೆ. ಇವಳನ್ನು ನೋಡಿದ ಅಗ್ನಿಭೂತಿಗೆ ಅಕ್ಕರೆ ಹುಟ್ಟುತ್ತದೆ. ಕರುಣೆ ಮತ್ತು ಅಕ್ಕರೆಗೂ ರಕ್ತ ಸಂಬಂಧಕ್ಕೂ ನೇರವಾದ ನಂಟಿದೆ ಎಂಬುದನ್ನು ಜನ್ಮಾಂತರಗಳ ಮೂಲಕ ಇದು ನಿರೂಪಿತವಾಗಿದೆ. ಇದೇ ಅಂಶದ ಪರಾಕಾಷ್ಠೆಯಲ್ಲಿ 'ಗೋದಾನ' ಕಾದಂಬರಿ ಮುಗಿಯುವುದನ್ನು ಮುಂದೆ ಚರ್ಚಿಸಲಾಗುವುದು. ಮೇಲಿನ ಪ್ರಸಂಗವು ಮತ್ತೊಂದು ಅತ್ಯಂತ ಸೂಕ್ಷ್ಮವಾದ ಮಾನವ ಸ್ವಭಾವವನ್ನು ಅನಾವರಣ ಮಾಡಿದೆ. ಜಗಳಕ್ಕೆ ಬಂದ ಪುನ್ನಿಗೆ ಆಕೆಯ ಗಂಡ ಹೀರಾನು ಹೊಡೆಯುತ್ತಿರುವಾಗ, ಹೋರಿ ಈ ರೀತಿ ಹೇಳಿದ. 'ಈಗ ಮತ್ತೆ ಪೊಡೆತ – ಬೈಯ್ಗುಳ ಶುರುಮಾಡಬೇಡ. ಇದರಿಂದ ಹೆಂಗಸರು ನಾಚಿಕೆ-ಗೀಚಿಕೆ ಬಿಟ್ಟು ಬಿಡುತ್ತಾರೆ'[11]. ಹೋರಿಯ ಆ ಒಂದೇ ಒಂದು ಮಾತು ಇಡೀ ಮಹಿಳಾ ಲೋಕದ ಸ್ವಭಾವದ ಒಂದು ಅಂಶವನ್ನು ಹೊರಗೆಡಹಲು ಪ್ರಯತ್ನಿಸುತ್ತಿದೆ. ಅದೇ ಕಾಲಕ್ಕೆ ಮೇಲಿಂದ ಮೇಲೆ ಹೆಂಗಸರ ಮೇಲೆ ದೌರ್ಜನ್ಯ ಮಾಡುವುದರಿಂದ ಅವರು ಅದನ್ನು ಕೇವಲ ನೈತಿಕೆಯ ಚೌಕಟ್ಟಿನಲ್ಲಿ ತೆಗೆದುಕೊಳ್ಳದೆ, ಅದನ್ನು ಮೀರಿ ಅದರಾಚೆಗೂ ಬರಬಹುದಾದ ಸಾಧ್ಯತೆಯ ಅಪಾಯವನ್ನು ಬಹಳ ಮುಂದಾಲೋಚನೆಯಿಂದ ಹೋರಿ ರಾಮ ನಿರೂಪಿಸುತ್ತಿದ್ದಾನೆ. ಹೆಂಗಸರು ತಮ್ಮ ನೈತಿಕತೆಯ ಸೂಕ್ಷ್ಮವನ್ನು ಮತ್ತು ಅದರ ಚೌಕಟ್ಟನ್ನು ಎಂತಹ ಪರಿಸ್ಥಿತಿಯಲ್ಲಿ ಕಳೆದುಕೊಳ್ಳಬಲ್ಲರು ಎಂಬ ಸಾಧ್ಯತೆಯ ಕಡೆಗೆ ಮೇಲಿನ ಒಂದೇ ಒಂದು ಸಾಲು ಬೆರಳು ಮಾಡುತ್ತಿದೆ.

ಸಣ್ಣ ಮಕ್ಕಳ ಸ್ವಭಾವ ಎಂತಹದ್ದಿರುತ್ತದೆ ಎಂಬುದನ್ನು ಕಾದಂಬರಿ ಬಹಳ ಸೂಕ್ಷ್ಮವಾಗಿ ನಿರೂಪಿಸಿದೆ. ಹೋರಿಯ ಮಗನಾದ ಗೋಬರನು, ಗೊಲ್ಲರ ಭೋಲಾನ ಮನೆಯಿಂದ ಹಸುವನ್ನು ಹೊಡೆದುಕೊಂಡು ಬರುವ ದೃಶ್ಯವನ್ನು, ನೋಡಿದ ಹೋರಿಯ ಹೆಣ್ಣು ಮಕ್ಕಳಾದ ರೂಪ ಮತ್ತು ಸೋನಾ ಇಬ್ಬರು ನಾನು ಮೊದಲು ನೋಡಿದೆ, ನೀನು ಆಮೇಲೆ ನೋಡಿದೆ ಎಂಬಂತೆ ಕಿತ್ತಾಡಿದರು ಹಾಗೂ ಕಚ್ಚಾಡಿದರು. ತಾನೇ ಮೊದಲು ನೋಡಿದ್ದು ಎಂಬ ಯಶಸ್ಸು ಸಿಗಲೇಬೇಕೆಂಬ ಹಠದೊಂದಿಗೆ ಸೋನಾಳಿಗೆ ಸಿಗುವ ಸಮಪಾಲಿನ ಬಗ್ಗೆ ಅಸಮಾಧಾನವನ್ನು ವ್ಯಕ್ತಪಡಿಸುವ ರೂಪಾಳ ಸ್ವಭಾವ ಇಲ್ಲಿ ನಿರೂಪಿತವಾಗಿದೆ.

ಹೋರಿಯು ಭೋಲಾನಿಂದ ಒಂದು ಹಸುವನ್ನು ಸಾಲದ ರೂಪದಲ್ಲಿ ತನ್ನ ಮನೆಗೆ ತರುವನು. ಇದನ್ನು ನೋಡಲು ತನ್ನ ತಮ್ಮಂದಿರಾದ ಸೋಬಾ ಮತ್ತು ಹೀರಾ ಬಂದೇ ಬರುತ್ತಾರೆ. ಅವರು ಬಂದು ಹಸುವನ್ನು ನೋಡಿದರೆ ತನಗೆ

ಸಂತೋಷವಾಗುತ್ತದೆ ಎಂಬುದಾಗಿ ಹೋರಿಯ ಬಲವಾದ ನಂಬಿಕೆ. ಆದರೆ ಅವರಿಬ್ಬರೂ ಹೋರಿಯ ಮನೆಗೆ ಹಸುವನ್ನು ನೋಡಲು ಬರಲೇ ಇಲ್ಲ. ಇದರಿಂದ ಹೋರಿಗೆ ಒಂದು ಬಗೆಯಲ್ಲಿ ಅಸಮಾಧಾನವಾಯಿತು. ಆದರೂ ಆತನ ಕುತೂಹಲ ತಣಿಯಲಿಲ್ಲ. ಈಗ ಬರಬಹುದು, ಇನ್ನೊಂದು ಕ್ಷಣಕ್ಕೆ ಬರಬಹುದು ಎಂಬುದು ಆತನ ಸತತ ನಿರೀಕ್ಷೆ. ಆದರೆ ಪ್ರತಿ ಕ್ಷಣವೂ ಆತನ ನಿರೀಕ್ಷೆ ಹುಸಿಯಾಗುತ್ತಲೆ ಸಾಗುತ್ತಿತ್ತು. ಜೊತೆಗೆ ಅವನ ನಂಬಿಕೆಯೂ ಇದರ ಜೊತೆಯಲ್ಲಿ ಗಟ್ಟಿಯಾಗುತ್ತಲೇ ಸಾಗಿತ್ತು. ಹಾಗಾಗಿ ಮೊದಲ ಹಂತದಲ್ಲಿ ತನ್ನ ಮಗಳಾದ ರೂಪನ ಮೂಲಕ ತನ್ನ ತಮ್ಮಂದಿರನ್ನು ಕರೆಯಲು (ಹಸುವನ್ನು ನೋಡುವ ಸಲುವಾಗಿ) ಕಳಿಸುವ ಸಂದರ್ಭದಲ್ಲಿ ಧನಿಯಳು ವಿರೋಧ ಮಾಡುತ್ತಾಳೆ. ಹಾಗಾಗಿ ಹೋರಿಯೆ ಸಹೋದರರ ಮನೆಯ ಕಡೆಗೆ ಹೋಗುತ್ತಾನೆ. ಅಲ್ಲಿ ಅವನ ತಮ್ಮಂದಿರು ಹೋರಿಯ ಬಗ್ಗೆ ಈ ಮುಂದಿನಂತೆ ಮಾತಾಡುತ್ತಿರುತ್ತಾರೆ. 'ಹೀರಾ ಹೇಳಿದ. ನಾವೆಲ್ಲ ಒಟ್ಟಿಗಿರುವಾಗ ಒಂದು ಕುರಿಯನ್ನೂ ಕೊಂಡುಕೊಳ್ಳಲಿಲ್ಲ. ಈಗ ಸೀಮೆ ಹಸು ತೆಗೆದುಕೊಳ್ಳುವುದಕ್ಕಾಗುತ್ತದೆ. ತಮ್ಮಂದಿರ ಸ್ವತ್ತು ಅಪಹರಿಸಿ ಶ್ರೀಮಂತನಾದವನನ್ನು ನಾನಂತು ಕಂಡಿಲ್ಲಪ್ಪ'[೧]. ಈ ಮಾತುಗಳನ್ನು ಹೋರಿಯು ಕೇಳಿಸಿಕೊಂಡು ಬೇಸರದಿಂದ ವಾಪಸ್ ಮನೆಗೆ ಬಂದ. ಒಂದು ಕಾಲದಲ್ಲಿ ಹೋರಿಯು ಲೇವಾದೇವಿ ಮಾಡಿದವನು. ಅದರಲ್ಲಿ ಬಂದಿರಬಹುದಾದ ಲಾಭವನ್ನು ತಮ್ಮಂದಿರಿಗೆ ಕೊಡದೆ ತಾನೇ ಇಟ್ಟುಕೊಂಡಿರಬಹುದು. ಆ ಹಣದಿಂದ ಈಗ ಹಸುವನ್ನು ಕೊಂಡಿರಬಹುದು ಎಂಬುದು ಸೋಬಾನ ಖಚಿತವಾದ ಗುಮಾನ ಹಾಗೂ ಬಲವಾದ ನಂಬಿಕೆ. ಆ ಕಾರಣದಿಂದಲೇ ಅವನು ಹೋರಿಯ ಮೇಲೆ ಆರೋಪ ಹೊರಿಸುತ್ತಾನೆ. ಆದರೆ ಇದನ್ನು ಸೋಬಾನು ಒಪ್ಪಲಿಲ್ಲ. ಇದಕ್ಕೆ ಪ್ರತಿಯಾಗಿ ಸೋಬಾನು 'ಹೀರಾ ನೀನು ಅಣ್ಣನಿಗೆ ಅನ್ಯಾಯ ಮಾಡುತ್ತಿದ್ದೀಯ. ಅಣ್ಣ ಒಂದೊಂದು ಪೈಸೆಯ ಲೆಕ್ಕವನ್ನು ಕೊಟ್ಟಿದ್ದರೂ ಮೊದಲು ಅವರ ಸಂಪಾದನೆಯನ್ನು ಮುಚ್ಚಿಟ್ಟುಕೊಂಡಿದ್ದರು ಎನ್ನುವುದನ್ನು ನಾನು ಖಂಡಿತ ಒಪ್ಪುವುದಿಲ್ಲ'[೨] ಎಂದು ಹೇಳಿದನು. ಈ ಸನ್ನಿವೇಶವು ಮೂರು ಬಗೆಯ ಸ್ವಭಾವಗಳನ್ನು ಅನಾವರಣಗೊಳಿಸಿದೆ. ಒಂದು: ಹೋರಿಯು ಹಸುವನ್ನು ತಂದಿರುವುದರಿಂದ ತನಗೆ ಆಗಿರುವ ಸಂತೋಷ ಅವರಿಗೂ ಆಗುತ್ತದೆ ಎಂಬ ಅವನ ನಂಬಿಕೆ. ಸಂತೋಷವನ್ನು ಹಂಚಿಕೊಂಡರೆ ರಕ್ತ ಸಂಬಂಧಿಗಳ ಜೊತೆಯಲ್ಲೆ ಹಂಚಿಕೊಳ್ಳಬೇಕು. ಇದನ್ನು ಎಲ್ಲರೂ ಸಮಾನವಾಗಿಯೇ ಸ್ವೀಕರಿಸುತ್ತಾರೆ ಎಂಬ ಅವನ ಮುಗ್ಧತೆ. ಇದು ಹೋರಿಯ ನಿಷ್ಕಲ್ಮಷ ಮನಸ್ಸನ್ನು ತೋರಿಸುತ್ತದೆ. ಎರಡು: ಹೋರಿಯ ತಮ್ಮನಾದ ಸೋಬಾ ನೇರವಾಗಿ ಹಸುವನ್ನು ನೋಡಲು ಹೋರಿಯ ಮನೆಗೆ ಹೋಗದಿದ್ದರೂ ಕೂಡ ಅಣ್ಣನ ಬಗ್ಗೆ ಯಾವುದೆ ಅನುಮಾನ ಪಡದೆ ಒಂದು ಬಗೆಯ ಅಭಿಮಾನವನ್ನು ಇಟ್ಟುಕೊಂಡವನು. ಮೂರು: ಆದರೆ ಹೀರಾ ಮಾತ್ರ ಹೋರಿಯನ್ನು ಅನುಮಾನಿಸುತ್ತಾನೆ, ಸಂದೇಹಿಸುತ್ತಾನೆ. ಆ ಸಮಯದಲ್ಲಿ

ತಮ್ಮನ್ನು ಸರಿಯಾಗಿ ನೋಡಿಕೊಳ್ಳದೆ ಹಣವನ್ನು ಬಚ್ಚಿಟ್ಟುಕೊಂಡು ಈಗ ಅದರಿಂದ ಹಸುವನ್ನು ಕೊಂಡುಕೊಂಡಿದ್ದಾನೆ ಎಂಬ ಅಸಮಾಧಾನ ವ್ಯಕ್ತಪಡಿಸುತ್ತಾನೆ. ಹೀಗೆ ಈ ಒಂದು ಸನ್ನಿವೇಶವು ಮೂರು ಬಗೆಯ ಸ್ವಭಾವಗಳನ್ನು ಬಹಳ ಸೂಕ್ಷ್ಮವಾಗಿ ಅನಾವರಣ ಮಾಡಿದೆ.

ಹೋರಿಯು ಕಾದಂಬರಿಯಲ್ಲಿ ಮತ್ತೊಂದು ಕಡೆ, ಇದೇ ಬಗೆಯ ಅನುಮಾನ ಹಾಗೂ ಆ ಮೂಲಕ ಅವಮಾನಕ್ಕೆ ಒಳಗಾಗುತ್ತಾನೆ. ಹೋರಿಯು ತನ್ನ ಅಗತ್ಯಕ್ಕಾಗಿ ಝಿಂಗರಿ ಸಿಂಹನ ಹತ್ತಿರ ಸಾಲ ಕೇಳಲು ಹೋಗುತ್ತಾನೆ. ಆಗ ಝಿಂಗರಿ ಸಿಂಹನು 'ಎಷ್ಟು ಬೇಕಾದರೂ ಬಡ್ಡಿ ಕೊಡಬಹುದು. ಆದರೆ ಹೂತಿಟ್ಟ ಹಣ ಮಾತ್ರ ತೆಗೆಯುವುದು ಬೇಡ. ನಿಮ್ಮಗಳದು ಇದೇ ಜಾಯಮಾನ'[೧೪] ಎಂಬುದಾಗಿ ವ್ಯಂಗ್ಯವಾಗಿ ಹೇಳಿದನು. ಆದರೆ ಹೋರಿಯ ಪರಿಸ್ಥಿತಿಯೇ ಬೇರೆ ಇತ್ತು ಎಂಬುದನ್ನು ಈ ಮುಂದಿನ ಸಾಲುಗಳು ವ್ಯಕ್ತಪಡಿಸುತ್ತವೆ. 'ಬಾಬೂ ಸಾಹೇಬರೇ ಏನು ನೀವು ಹೇಳುತ್ತಿರುವುದು. ಯಾವುದು ಆ ಹೂತಿಟ್ಟ ಹಣ? ಊಟಕ್ಕೆ ಕಷ್ಟಪಡುತ್ತಿದ್ದೇವೆ. ಮಗನಿಗೆ ವಯಸ್ಸಾಯಿತು. ಮದುವೆ ಮಾಡಬೇಡವೆ? ಅದಕ್ಕೇ ಗತಿಯಿಲ್ಲವಲ್ಲ; ದೊಡ್ಡ ಹುಡುಗಿಯೂ ಮದುವೆಗೆ ತಯಾರಾಗಿದ್ದಾಳೆ. ಹಣ ಇದ್ದರೆ ಈಗ ಅದನ್ನು ಉಪಯೋಗಿಸಿಕೊಳ್ಳುತ್ತಿರಲಿಲ್ಲವೆ?'[೧೫] ಎಂಬುದಾಗಿ ಹೋರಿಯು ಮುಕ್ತವಾಗಿ ಹೇಳಿದನು. ಝಿಂಗುರಿ ಸಿಂಹನು ಆ ರೀತಿ ಹೋರಿಯ ಮೇಲೆ ಆರೋಪ ಮಾಡಲು ಬೇರೆಯೇ ಕಾರಣವಿತ್ತು. ಅದೇನೆಂದರೆ ಹೋರಿಯನ್ನು ಸಾಲದಲ್ಲಿ ಸಿಲುಕಿಸಿ ಹೋರಿಯ ಹಸುವನ್ನು ಕಬಳಿಸುವ ಉದ್ದೇಶವನ್ನು ಹೊಂದಿದ್ದ ಅವನ ಸ್ವಭಾವವನ್ನು ಇದು ತೋರಿಸುತ್ತದೆ.

ತಮ್ಮಂದಿರ ಮಾತುಗಳನ್ನು ಕೇಳಿಸಿಕೊಂಡು, ಬಹಳ ಅಸಮಾಧಾನದಿಂದ ಮನೆಗೆ ಬಂದ ಹೋರಿಯು, ಆ ಹಸುವನ್ನು ವಾಪಸ್ ಭೋಲಾನಿಗೆ ಕೊಡಲು ಹೊಡೆದುಕೊಂಡು ಹೋಗಲು ಪ್ರಯತ್ನಿಸಿದ. ಆಗ ಇದು ಯಾಕೆ ಎಂಬುದಾಗಿ ಧನಿಯ ಕೇಳಿದಳು. ಅದಕ್ಕೆ ಹೋರಿಯು ಇಡೀ ಊರು ನನ್ನ ಬಗ್ಗೆ ತಪ್ಪು ತಿಳಿಯುತ್ತಿದೆ. ಆದ್ದರಿಂದ ಹಸುವನ್ನು ವಾಪಸ್ ಕೊಡುತ್ತೇನೆ ಎನ್ನುತ್ತಾನೆ. ಆದರೆ ಇದನ್ನು ಒಪ್ಪದ ಧನಿಯಾಳು ಇಡೀ ಊರು ನಿನ್ನ ಬಗ್ಗೆ ತಪ್ಪು ತಿಳಿದಿಲ್ಲ. ಆದರೆ ನಿನ್ನ ತಮ್ಮಂದಿರು ನಿನ್ನ ಬಗ್ಗೆ ತಪ್ಪು ಆರೋಪ ಹೊರಿಸಿರಬಹುದು ಎನ್ನುತ್ತಾಳೆ. ಅದಕ್ಕೆ ಹೋರಿಯು ಮೊದಲ ಹಂತದಲ್ಲಿ ಒಪ್ಪುವುದಿಲ್ಲ. ಆದರೆ ಕೊನೆಯ ಹಂತದಲ್ಲಿ ಹೀರಾ ಹೇಳಿದ ಸಂದೇಹದ ಮಾತುಗಳನ್ನು ಧನಿಯಾಳಿಗೆ ಹೇಳಿಬಿಡುತ್ತಾನೆ. ಈ ಪ್ರಸಂಗವು ಧನಿಯಾಳು ಹೋರಿಯ ತಮ್ಮಂದಿರ ಬಗ್ಗೆ ತಪ್ಪು ತಿಳಿಯುವ ಅನುಮಾನದ ಸ್ವಭಾವವನ್ನೂ ಮತ್ತು ಹೋರಿಯು ಯಾವುದನ್ನೂ ಮುಚ್ಚಿಡಲಾರ ಎಂಬ ಆತನ ಮುಗ್ಧತೆಯನ್ನೂ ಒಟ್ಟೊಟ್ಟಿಗೇ ಅನಾವರಣ ಮಾಡುತ್ತಿದೆ[೧೬].

ಜುನಿಯ ಭೋಲಾನ ಮಗಳು. ಇವಳು ಚಿಕ್ಕ ವಯಸ್ಸಿನಲ್ಲೆ ಗಂಡನನ್ನು ಕಳೆದುಕೊಂಡು ವಿಧವೆಯಾಗಿದ್ದವಳು. ಇವಳನ್ನು ಕುಟುಂಬದಲ್ಲಿಯೂ ಸಹ ಸರಿಯಾಗಿ ನೋಡಿಕೊಳ್ಳುವುದಿಲ್ಲ. ಇವಳು ದಿನನಿತ್ಯ ಹಾಲು ಮಾರಲು ಪಟ್ಟಣಕ್ಕೆ ಹಾಗೂ ಶ್ರೀಮಂತರ ಮನೆಗಳಿಗೆ ಹೋಗುವಳು. ಆ ಸಮಯದಲ್ಲಿ ಬೇರೆಬೇರೆಯ ಜನರು ವಿಧವೆಯಾಗಿರುವ ಈಕೆಯನ್ನು ಹೇಗೆ ನೋಡುತ್ತಾರೆ, ಅವಳ ಪರಿಸ್ಥಿತಿ ಮತ್ತು ಅದಕ್ಕೆ ಅವಳ ಪ್ರತಿಕ್ರಿಯೆ ಏನು ಎಂಬುದನ್ನು ಮುಂದಿನ ಉಲ್ಲೇಖದಲ್ಲಿ ಗಮನಿಸಬಹುದು. 'ಅವರೆಲ್ಲರೂ ರಸ ಹೀರಿ ಓಡಿಹೋಗುವ ದುಂಬಿಗಳೇ. ನಾನು ಅವರತ್ತ ಕುಡಿನೋಟ ಬೀರುತ್ತೇನೆ. ಅವರಿಗೆ ಆಸೆ ಹುಟ್ಟಿಸುತ್ತೇನೆ. ನಗುತ್ತೇನೆ. ಅವರು ನನ್ನನ್ನು ಕತ್ತೆಯಾಗಿಸಿದರೆ, ನಾನು ಅವರನ್ನು ಗೂಬೆಯನ್ನಾಗಿಸುತ್ತೇನೆ. ಅವರು ನನಗೆ ಮೋಸ ಮಾಡುತ್ತಾರೆ. ನಾನು ಅವರಿಗೆ ಮೋಸ ಮಾಡುತ್ತೇನೆ. ನಾನು ಸತ್ತರೆ ಅವರ ಕಣ್ಣಲ್ಲಿ ಒಂದೇ ಒಂದು ಹನಿಯೂ ನೀರು ಬರುವುದಿಲ್ಲ. ಅವರೇನಾದರೂ ಸತ್ತರೆ ನನಗೆ ಖುಷಿಯಾಗುತ್ತದೆ'[೧೭]. ಈ ಸನ್ನಿವೇಶವು ಯಾವ ಯಾವ ಸ್ವಭಾವಗಳನ್ನು ನಿರೂಪಿಸಿದೆ ಎಂಬುದನ್ನು ಪರಿಶೀಲಿಸಬಹುದು. ಮೊದಲನೆಯದು ಶ್ರೀಮಂತರು ವಿಧವೆಯೊಬ್ಬಳನ್ನು ಯಾವ ದೃಷ್ಟಿಯಲ್ಲಿ ನೋಡುತ್ತಿದ್ದರು, ಅವರ ಒಳಮನಸ್ಸಿನ ಅಪೇಕ್ಷೆ ಹಾಗೂ ವಿಕೃತ ಆಸೆಗಳು ಏನಾಗಿದ್ದವು ಎಂಬುದನ್ನು ತೋರಿಸುತ್ತಿದೆ. ಮತ್ತೊಂದು ಕಡೆ ವ್ಯಾಪಾರ ಮಾಡುತ್ತಿದ್ದ ಜುನಿಯಳು ವ್ಯಾಪಾರದ ಅಗತ್ಯಕ್ಕಾಗಿ ಯಾವ ಯಾವ ತಂತ್ರಗಳನ್ನು ಬಳಸುತ್ತಿದ್ದಳು ಎಂಬ ಅವಳ ಸ್ವಭಾವವನ್ನು ಪ್ರಕಟಿಸುತ್ತಿದೆ. ಅವರು ನಕ್ಕಾಗ ಈಕೆ ನಗುವುದು, ಅವರಿಗೆ ಈಕೆ ಕುಡಿನೋಟ ಬೀರುತ್ತಿದ್ದುದು ಈ ಕಾರಣಕ್ಕಾಗಿಯೇ. ಅಲ್ಲದೆ ತನ್ನನ್ನು ಕತ್ತೆ ಎಂದು ಭಾವಿಸಿದ್ದ ಆ ಜನರನ್ನು ಈಕೆ ಸರಳವಾಗಿ ತಿಳಿಯದೆ ಅವರನ್ನು ಅತ್ಯಂತ ಜಾಣ್ಮೆ ಹಾಗೂ ನಯಗಾರಿಕೆಯಿಂದಲೆ ಗೂಬೆಯಾಗಿಸುವಂತಹ ಸ್ವಭಾವವನ್ನು ತೋರಿಸುತ್ತದೆ.

ಜುನಿಯಾಳ ಸ್ವಭಾವ ಈ ರೀತಿ ವ್ಯಕ್ತವಾಗಿದ್ದರೂ ಕೂಡ ಅವಳ ನಿಜವಾದ ಆಂತರಿಕ ಸ್ವಭಾವ ಯಾವುದಾಗಿತ್ತು ಎಂಬುದನ್ನು ಕಾದಂಬರಿ ಮತ್ತೊಂದು ಆಯಾಮದಿಂದ ಅನಾವರಣ ಮಾಡಿದೆ. ಜುನಿಯಾಳ ಅತ್ತಿಗೆಯರು ಎಂತಹ ಸ್ವಭಾವವನ್ನು ಹೊದಿದ್ದರು ಎಂಬುದನ್ನು ನಿರೂಪಿಸುವ ಮೂಲಕ ಜುನಿಯಾಳ ಸ್ವಭಾವ ಯಾವುದಾಗಿತ್ತು ಎಂಬುದನ್ನು ಕಟ್ಟಿಕೊಡುತ್ತದೆ. ಅದಕ್ಕೆ ಕಾದಂಬರಿಯ ಮುಂದಿನ ಉಲ್ಲೇಖವನ್ನು ಗಮನಿಸಬಹುದು. 'ನನ್ನ ಅಣ್ಣಂದಿರೇನು ಕುರೂಪಿಗಳಲ್ಲ; ಅಂತಹವರು ನೂರಕ್ಕೆ ಒಬ್ಬರು. ಆದರೆ ನಮ್ಮ ಅತ್ತಿಗೆರಿಯಗೆ ಅವರು ಹಿಡಿಸುವುದಿಲ್ಲ. ಅವರಿಗೆ ತಮ್ಮ ಕಿವಿಗೆ ಚಿನ್ನ ವಾಲೆ ಮಾಡಿಸುವವರು, ತೆಳುವಾದ ಸೀರೆ ತಂದು ಕೊಡುವವರು ಹಾಗೂ ಪ್ರತಿ ನಿತ್ಯ ಚಾಟ್ ತಿನ್ನಿಸುವವರು ಬೇಕು. ನನಗೂ ವಾಲೆ ಮತ್ತು ಮಿಠಾಯಿ ಇಷ್ಟ. ಆದರೆ ಇದಕ್ಕಾಗಿ ನಾನು ನನ್ನ ಮಾನ ಮರ್ಯಾದೆ ಮಾರಿಕೊಳ್ಳಲು ಖಂಡಿತ ಸಿದ್ಧಳಿಲ್ಲ'[೧೮].

'ಗೋದಾನ' ಕಾದಂಬರಿಯು ಕಾಡಿನ ಹುಡುಗಿಯೊಬ್ಬಳ ಅಂತರಂಗದ ಸ್ವಭಾವವನ್ನು ಹಾಗೂ ಆಕೆಯ ಸ್ವಾಭಿಮಾನವನ್ನು ನಿರೂಪಿಸಿದೆ. ಕಾದಂಬರಿಯಲ್ಲಿ ಶ್ರೀಮಂತ ವರ್ಗದವರು ಧನುರ್ಯಜ್ಞದ ನಾಟಕ ಆಡಿಸುತ್ತಾರೆ. ಇದು ನಡೆದ ಮೇಲೆ ಅವರ ಪದ್ಧತಿಯ ಪ್ರಕಾರ ಅವರೆಲ್ಲ ಕಾಡಿಗೆ ಬೇಟೆಯಾಡಲು ಹೋಗುತ್ತಾರೆ. ಅಲ್ಲಿ ಇವರಿಗೆ ಒಬ್ಬಳು ಕಾಡಿನ ಹುಡುಗಿ ಪರಿಚಯವಾಗುತ್ತಾಳೆ. ಅವಳು ಮೆಹತಾ ಹಾಗೂ ಮಾಲತಿಯನ್ನು ದಣಿವಾರಿಸಿಕೊಳ್ಳಲು ತನ್ನ ಗುಡಿಸಲಿಗೆ ಕರೆದುಕೊಂಡು ಹೋಗುತ್ತಾಳೆ. ಆದರೆ ಮಾಲತಿಯು ಅವಳನ್ನು ತನ್ನ ದರ್ಪದ ಮೂಲಕವೇ ನಗಣ್ಯವಾಗಿ ನೋಡಿ ಅವಳ ಸತ್ಕಾರಕ್ಕೆ ಆಸಕ್ತಿ ತೋರದೆ ವಿರೋಧಾಭಾಸ ವ್ಯಕ್ತಪಡಿಸುವಳು. ಅದನ್ನು ಅತ್ಯಂತ ಸೂಕ್ಷ್ಮವಾಗಿ ಗಮನಿಸಿದ ಮತ್ತು ಅದನ್ನು ಸಹಿಸಿಕೊಳ್ಳದ ಕಾಡಿನ ಹುಡುಗಿಯು 'ಬಾಯಿಯವರೆ ನಾನು ಯಾರ ಗುಲಾಮಳೂ ಅಲ್ಲ. ನೀವು ದೊಡ್ಡವರಾದರೆ ಅದು ನಿಮ್ಮ ಮನೆಯಲ್ಲಿ. ನಾನೇನು ನಿಮ್ಮ ಹತ್ತಿರ ಬಿಕ್ಷೆ ಬೇಡಲು ಬರುವುದಿಲ್ಲ. ನಾನು ಮೋಟಾರು ಹೋಗಿ ತರುವುದಿಲ್ಲ'[೧೯] ಎಂಬುದಾಗಿ ಪ್ರತಿಕ್ರಿಸುತ್ತಾಳೆ. ಕಾಡಿನ ಹುಡುಗಿಯನ್ನು ಕೇವಲವಾಗಿ ಪರಿಗಣಿಸುವ ಮಾಲತಿಯ ಶ್ರೀಮಂತಿಕೆ ದರ್ಪದ 'ನಾಗರಿಕ' ಎಂದು ಕರೆಯಲಾಗುವ ಸ್ವಭಾವವೂ; ಅದೇ ಕಾಲಕ್ಕೆ 'ಅನಾಗರಿಕ' ಎಂದು ಕರೆಯಲಾಗುವ ಕಾಡಿನ ಹುಡುಗಿಯ ದಟ್ಟವಾದ ಸ್ವಾಭಿಮಾನವನ್ನೂ ಒಟ್ಟೊಟ್ಟಿಗೇ ಈ ಸನ್ನಿವೇಶವು ಕಟ್ಟಿಕೊಟ್ಟಿದೆ.

ಹೋರಿಯ ವ್ಯವಸಾಯ ನಿಂತು ಹೋಗಿರುತ್ತದೆ. ಹೋರಿಯು ರಾಯಸಾಹೇಬನಿಗೆ ಗೇಣಿ ಕೊಡಬೇಕಾಗಿರುತ್ತದೆ. ಆದರೆ ಇದಕ್ಕೆ ಅವನಲ್ಲಿ ಯಾವುದೆ ಹಣ ಇರುವುದಿಲ್ಲ. ಅಂತಹ ಸಮಯದಲ್ಲಿ ಝಿಂಗಾರಿ ಸಿಂಹನ ಹತ್ತಿರ ಸಾಲ ಕೇಳಲು ಹೋಗುತ್ತಾನೆ. ಆಗ ಝಿಂಗಾರಿ ಸಿಂಹನು ಸಾಲಕ್ಕಾಗಿ ನಿನ್ನ ಹಸುವನ್ನು ಅಡವಿಡು ಎಂದು ಸೂಚಿಸುತ್ತಾನೆ. ಅದಕ್ಕೆ ಹೋರಿಯು ಕುಟುಂಬದವರ ಜೊತೆ ಮಾತಾಡಿ ನಂತರ ಹೇಳುತ್ತೇನೆ ಎನ್ನುವನು. ಮನೆಯಲ್ಲಿ ಇದನ್ನು ಪ್ರಸ್ತಾಪ ಮಾಡಿದಾಗ ಇದಕ್ಕೆ ಯಾರೂ ಒಪ್ಪುವುದಿಲ್ಲ. ಮಗಳಾದ ಸೋನಾಳು 'ಹಸುವಿನ ಬದಲು ನನ್ನನ್ನೇ ಮಾರಿಬಿಡಿ. ಹಸುವಿನಿಂದ ಏನೂ ಹೆಚ್ಚು ಸಿಗುವುದಿಲ್ಲವಲ್ಲ? ಆಗ ಹೋರಿ ದುವಿಧಿಗೆ ಸಿಕ್ಕಿಕೊಂಡ'[೨೦]. ಸೋನಾಳಿಗೆ ಮತ್ತು ರೂಪಾಳಿಗೆ ಹಸುವಿನ ಬಗ್ಗೆ ಇದ್ದ ಅದಮ್ಯ ಪ್ರೀತಿ ಮತ್ತು ಕಾಳಜಿಯ ಸ್ವಭಾವವನ್ನು ಇದು ತೋರಿಸುತ್ತದೆ. ಅದೇ ಕಾಲಕ್ಕೆ ಹೋರಿ ದುವಿಧಿಗೆ ಸಿಲುಕಿಕೊಂಡ ಎಂಬುದು ಮಗಳನ್ನು ಮಾರಬೇಕಾದ ನೈತಿಕತೆಯ ಊಹಾತೀತ ಅಪರಾಧಿ ಪ್ರಜ್ಞೆಯ ಭಾವವನ್ನೂ ರಾಮನಲ್ಲಿ ಸ್ಫುರಿಸಿತು. ಜೊತೆಗೆ ಇಂತಹ ಇಕ್ಕಟ್ಟಿನಲ್ಲಿ ಆ ಹಸುವಿಗೆ ಯಾವ ಭಾವನೆ ಉಂಟಾಗಿರಬಹುದು ಎಂಬುದನ್ನು ಕಾದಂಬರಿಯು ಶೋಧಿಸುತ್ತದೆ. ಅದು ಈ ಮುಂದಿನ ಮಾತುಗಳಲ್ಲಿ ವ್ಯಕ್ತವಾಗಿದೆ. 'ಆ ಹಸುವಿನ ಕಪ್ಪು ಕಣ್ಣುಗಳು ನೀರು ತುಂಬಿರುವಂತೆ ಹಾಗೂ ಆ ಹಸು ಅವನಿಗೆ ಈ ರೀತಿ ಹೇಳುತ್ತಿರುವಂತೆ ಭಾಸವಾಗುತ್ತದೆ. 'ಏನು ನಾಲ್ಕೈದು ದಿನಕ್ಕೆ ನಿಮ್ಮ ಮನಸ್ಸಿಗೆ

ನಾನು ಬೇಡವಾದೆನೆ? ನಾನು ಬದುಕಿರುವವರೆಗೂ ನನ್ನನ್ನು ಮಾರುವುದಿಲ್ಲ ಎಂದು ಮಾತು ಕೊಟ್ಟಿದ್ದೀರಲ್ಲವೆ? ಇದೇ ನಿಮ್ಮ ಮಾತೇ! ನಾನು ನಿಮ್ಮ ಹತ್ತಿರ ಎಂದೂ ಯಾವ ದೂರನ್ನೂ ಹೇಳಿಕೊಳ್ಳಲಿಲ್ಲ. ಒಣಗಿದ್ದೋ ಒರಟಾಗಿದ್ದೋ ಯಾವುದನ್ನು ನೀವು ಹಾಕಿದರೂ ಅದನ್ನೇ ನಾನು ಸಂತೋಷದಿಂದ ತಿನ್ನುತ್ತಿರಲಿಲ್ಲವೆ? ನೀವೆ ಹೇಳಿ'[೨೧.]

ಹೋರಿಯ ಹಸು ಬಾಯಲ್ಲಿ ನೊರೆ ಸೂಸಿ ಅಸು ನೀಗುತ್ತದೆ. ಇದಕ್ಕೆ ಕಾರಣ ಏನಿರಬಹುದು ಎಂಬ ಹುಡುಕಾಟ ನಡೆಯುತ್ತದೆ. ಒಂದು ರಾತ್ರಿ ಕೊಟ್ಟಿಗೆಯ ಹತ್ತಿರ ಕೆಂಡಕ್ಕಾಗಿ ಹೀರಾ ಬಂದಿದ್ದ. ಇದನ್ನು ಹೋರಿಯು ಹೆಂಡತಿಗೆ ಹೇಳಿದ್ದ. ಈಗ ಹಸು ಸತ್ತಿರುವುದರಿಂದ ಅದಕ್ಕೆ ಕಾರಣ ಹೀರಾನೇ ಎಂಬುದು ಧನಿಯಾಳ ಬಲವಾದ ಗುಮಾನಿ ಮತ್ತು ಅವಳ ನಂಬಿಕೆ. ಇದನ್ನು ಧನಿಯಾ ಹೇಳಿದಾಗ ಹೋರಿ ಇದನ್ನು ಕಡಾಖಂಡಿತವಾಗಿ ವಿರೋಧಿಸುತ್ತಾನೆ. ಈ ಪ್ರಸಂಗದಲ್ಲಿ ಧನಿಯಾಳು ಹೀರಾನ ಬಗ್ಗೆ ಪಡುವ ಅನುಮಾನವು ಕೇವಲ ಅವನ ಬಗೆಗೆ ಮಾತ್ರವಲ್ಲದೆ, ಅಣ್ಣ ತಮ್ಮರು ಚೆನ್ನಾಗಿರುವುದರ ಕುರಿತು ಅವರಿಬ್ಬರಲ್ಲಿ ಬಿರುಕು ಉಂಟುಮಾಡಬೇಕೆಂಬ ಒಳಗಿನ ಹಂಬಲವೂ ಇದ್ದಂತೆ ತೋರುತ್ತದೆ. ಇದಕ್ಕೆ ಹೋರಿಯು ಕೆಂಡ ತರಲು ಹೀರಾ ಬಂದುದನ್ನು ಹೇಳಿದ್ದು ಒಂದು ನೆಪವಾಗುತ್ತದೆ. ಆದರೆ ಹೋರಿ ಮೊದಲು ಹೀರಾ ಬಂದಿದ್ದ ಎಂದು ಮುಗ್ಧವಾಗಿ ಹೇಳಿಬಿಟ್ಟವನು ಆನಂತರ ಅವನು ಬಂದೇ ಇರಲಿಲ್ಲ, ನಾನು ನೋಡಿಯೇ ಇರಲಿಲ್ಲ ಮತ್ತು ಇದನ್ನು ಧನಿಯಾಳಿಗೆ ಹೇಳಿಯೂ ಇರಲಿಲ್ಲ ಎಂಬುದಾಗಿ ಮಗನ ತಲೆಯ ಮೇಲೆ ಕೈಯಿಟ್ಟು ಪ್ರಮಾಣ ಮಾಡುತ್ತಾನೆ. ಇದು ಅತ್ಯಂತ ಬಿಕ್ಕಟ್ಟಿನಲ್ಲಿ ಹೋರಿಯು ಯಾರ ಪರವಿರಬೇಕು ಮತ್ತು ಯಾರ ವಿರುದ್ಧವಿರಬೇಕು ಎಂಬುದರ ಬಗೆಗಿನ ಅವನ ಸ್ವಭಾವವನ್ನು ತೋರಿಸುತ್ತಿದೆ. ಜೊತೆಗೆ ಹೆಂಡತಿಗಿಂತಲೂ ಹೆಚ್ಚಾಗಿ ರಕ್ತವನ್ನು ಹಂಚಿಕೊಂಡು ಹುಟ್ಟಿರುವ ಹೀರಾನ ಬಗೆಗಿನ ಒಲವನ್ನು ಹಾಗೂ ಆತನು ಯಾವುದೇ ಕಾರಣಕ್ಕೂ ದುಷ್ಟನಲ್ಲ ಎಂಬುದನ್ನು ಗಟ್ಟಿಯಾಗಿ ನಿವೇದಿಸಲು ಅವನು ಮಾಡಿದ ಪ್ರಯತ್ನವನ್ನು ಇದು ತೋರಿಸುತ್ತದೆ. ಇದಕ್ಕೆ ವಿರುದ್ಧವಾಗಿ ಧನಿಯಾಳ ಕಲ್ಪನೆ ಗರಿಬಿಚ್ಚುವುದು ಹೀಗೆ. 'ಹೀರಾನು ಸೋಬಾನ ಮನೆಯಿಂದ ಕುಡುಗೋಲು ತೆಗೆದುಕೊಂಡು ಬಂದು, ಯಾವುದೊ ವಿಷದ ಮೂಲಿಕೆಯನ್ನು ಕಿತ್ತು ಹಸುವಿಗೆ ತಿನಿಸಿಬಿಟ್ಟಿದ್ದಾನೆ. ಆ ರಾತ್ರಿ ಅವನೊಡನೆ ಜಗಳವಾಯಿತಲ್ಲ, ಅಂದಿನಿಂದಲೇ ಆ ಹೀರಾನ ಹೊಟ್ಟೆ ಉರಿಯುತ್ತಿತ್ತು'[೨೨] ಎಂಬುದಾಗಿ ಧನಿಯಾಳು ಪಂಡಿತ ದಾತಾದೀನನಿಗೆ ಹೇಳಿದಳು. ಹಸುವಿನ ಅಕಾಲಿಕ ಸಾವು ಧನಿಯಾಳಲ್ಲಿ ಮೂಡಿಸುವ ಮತ್ತು ಹುಟ್ಟಿಸುವ ಅನುಮಾನದ ಹಾಗೂ ಊಹೆಯ ಸಾಧ್ಯತೆಗಳು ಯಾವುವು ಎಂಬುದನ್ನು ಮೇಲಿನ ಸನ್ನಿವೇಶವು ಪರಿಣಾಮಕಾರಿಯಾಗಿ ಚಿತ್ರಿಸಿದೆ. ಆದರೆ ಹೋರಿಯ ಪಾಲಿಗೆ ರಕ್ತಸಂಬಂಧಿಯಾದ ಹೀರಾನನ್ನು ಬಿಟ್ಟುಕೊಡದೆ ಅವನನ್ನು ಸಮರ್ಥಿಸುವೊಂದೇ ಅವನ ಕೆಲಸವಾಗಿದೆ. ಆ

ಮೂಲಕ ತನ್ನ ಹೆಂಡತಿಯ ವಿರುದ್ಧದ ಭಾವನೆಯೂ ಇಲ್ಲಿ ವ್ಯಕ್ತವಾಗಿದೆ. ಇದೇ ಸನ್ನಿವೇಶದ ಮೂಲಕ ಪಂಚರು ಧನಿಯಾಳನ್ನು ಅನುಮಾನಿಸುವ ಬಹಳ ಸೂಕ್ಷ್ಮವಾದ ಊಹೆ ಹೇಗಿತ್ತು ಎಂದರೆ, ದಂಡದ ರೂಪದಲ್ಲಿ ಲಂಚ ಕೊಡಲು ಆಗದೇ ಇರುವುದರಿಂದ ಧನಿಯಾಳೇ ಹಸುವಿಗೆ ವಿಷ ಉಣಿಸಿರಬಹುದು ಎಂಬುದಾಗಿ ಅವರು ಹೇಳುತ್ತಾರೆ. ಇದನ್ನೂ ಕೂಡ ಧನಿಯಾ ಬಲವಾಗಿ ವಿರೋಧಿಸುತ್ತಾಳೆ ಮತ್ತು ಅದನ್ನು ತಳ್ಳಿ ಹಾಕುತ್ತಾಳೆ.

ಭೋಲಾನ ಮಗಳು ವಿಧವೆಯಾಗಿರುವ ಜುನಿಯ ಮತ್ತು ಹೋರಿ ರಾಮನ ಮಗನಾದ ಗೋಬರ ಈ ಇಬ್ಬರ ನಡುವೆ ಪ್ರೇಮ ಬೆಳೆಯುತ್ತದೆ. ಇದು ಎರಡೂ ಮನೆಗಳಿಗಲ್ಲದೆ ಇಡೀ ಊರಿಗೂ ಸುದ್ಧಿಯಾಗುತ್ತದೆ. ಆಗ ಜುನಿಯಾಳನ್ನು ಭೋಲಾ ಮನೆಯಲ್ಲಿಟ್ಟುಕೊಳ್ಳಲು ಒಪ್ಪುವುದಿಲ್ಲ. ಅದೇ ಕಾಲಕ್ಕೆ ಈ ವಿಷಯ ಗೊತ್ತಾಗಿರುವ ಧನಿಯಾಳೂ ಕೂಡ ಜುನಿಯಾಳನ್ನು ತನ್ನ ಮನೆಗೆ ಸೇರಿಸಿಕೊಳ್ಳಲು ಇಷ್ಟಪಡುವುದಿಲ್ಲ ಹಾಗೂ ಒಪ್ಪುವುದಿಲ್ಲ. ಅವಳ ಪ್ರಕಾರ ಇದು 'ಅನೈತಿಕ' ಸಂಬಂಧ. ಹಾಗಾಗಿ ಒಂದು ಸಮಯದಲ್ಲಿ ಧನಿಯಾಳು ಗಂಡನಾದ ಹೋರಿ ರಾಮನಲ್ಲಿ ಜುನಿಯಾಳ ಬಗ್ಗೆ ಕೆಟ್ಟದಾದ ಹಾಗೂ ತುಚ್ಛವಾದ ಮಾತುಗಳನ್ನು ಆಡುತ್ತಾಳೆ. ಅವಳ ಬಗ್ಗೆ 'ಹಾದರಗಿತ್ತಿ' ಎಂಬ ಪದವನ್ನೂ ಪ್ರಯೋಗ ಮಾಡುತ್ತಾಳೆ. ಆ ಸಮಯದಲ್ಲಿ ಜುನಿಯಾಳ ಬಗ್ಗೆ ಧನಿಯಾಳಿಗೆ ಅತ್ಯಂತ ಆಕ್ರೋಶವಿತ್ತು, ಸಿಟ್ಟಿತ್ತು ಹಾಗೂ ಅತ್ಯುಗ್ರ ಕೋಪವಿತ್ತು. ತನ್ನ ಆ ಕೋಪವನ್ನು 'ಹಾದರಗಿತ್ತಿ' ಎಂಬ ಪದದ ಮೂಲಕ ಅವಳು ಹೊರಗೆಡಹುತ್ತಾಳೆ. ಮತ್ತೊಂದು ಕಡೆ ಮಗನಾದ ಗೋಬರನು ಜುನಿಯಾಳನ್ನು ತನ್ನ ಮನೆಗೆ ಕರಕೊಂಡು ಬಂದು ಬಿಟ್ಟು, ಮಧ್ಯದಲ್ಲಿ ಅವನು ಎಲ್ಲಿಗೋ ಹೋಗಿಬಿಡುತ್ತಾನೆ. ತನ್ನ ಮನೆಯ ಒಳಗೆ ಬಂದ ಜುನಿಯಾಳನ್ನು ಗಮನಿಸಿದ ಇದೇ ಧನಿಯಾಳು ಅವಳು ಕಣ್ಣೀರು ಹಾಕುವುದನ್ನು ನೋಡಿ ಮತ್ತು ಆಕೆ ಆಗಲೆ ಗರ್ಭಿಣಿ ಆಗಿರುವುದನ್ನು ಗಮನಿಸಿ, ತನ್ನ ಆಕ್ರೋಶವನ್ನೆಲ್ಲ ಆ ಕ್ಷಣದಲ್ಲೆ ಮರೆತುಬಿಡುತ್ತಾಳೆ. ಧನಿಯಾಳ ಆ ಆಕ್ರೋಶ, ಧನಿಯಾಳ ಆ 'ನೈತಿಕತೆ'ಯ ಭಾವವು ತಕ್ಷಣ ಪಲ್ಲಟವಾಗಿ, ಅದು ತಾಯಿತನವಾಗಿ ರೂಪಾಂತರವಾಗುತ್ತದೆ. ಅವಳು ಅತ್ಯಂತ ಕರುಣೆಯಿಂದ ಜುನಿಯಾಳನ್ನು ಮನೆಯೊಳಗೆ ಕರಕೊಂಡು ಹೋಗಿ ಉಪಚರಿಸುತ್ತಾಳೆ. ಹೀಗೆ ಉಪಚರಿಸುವಾಗ ಮೊದಲು ಜುನಿಯಾಳ ಮೇಲಿದ್ದ ಅವಳ ಆಕ್ರೋಶವು ಈಗ ತನ್ನ ಮಗನ ವಿರುದ್ಧ ತಿರುಗುತ್ತದೆ. ಅಂದರೆ ಒಂದೇ ಸನ್ನಿವೇಶಕ್ಕೆ ಧನಿಯಾಳು ಮೂರು ಬಗೆಯಲ್ಲಿ ಪ್ರತಿಕ್ರಿಯಿಸುವುದನ್ನು ಇದು ನಿರೂಪಿಸಿದೆ.

ಶ್ರೀಮಂತರಾದ ಖನ್ನರವರ ಹೆಂಡತಿ ಗೋವಿಂದಿ. ತತ್ವಶಾಸ್ತ್ರದ ಪ್ರೊಫೆಸರ್ ಆದ ಮೆಹತಾರ ಸ್ನೇಹಿತೆ ಮಾಲತಿ. ಗೋವಿಂದಿ ಮತ್ತು ಮೆಹತಾರ ನಡುವೆ ಮಾಲತಿಯ ಸ್ವಭಾವದ ಬಗ್ಗೆ ಮಾತುಕತೆ ನಡೆಯುತ್ತದೆ. ಖನ್ನಾ ಮತ್ತು ಗೋವಿಂದಿಯ ನಡುವಿನ ಕೌಟುಂಬಿಕ ವಿಷಯದಲ್ಲಿ ಮಾಲತಿಯ ಪ್ರವೇಶವಾಗುತ್ತದೆ. ಖನ್ನಾರವರು

ಅತಿಯಾಗಿ ಮಾಲತಿಯನ್ನು ಇಷ್ಟಪಡುತ್ತಾರೆ. ಇದರಿಂದ ಗೋವಿಂದಿಯ ಮನಸ್ಸಿನಲ್ಲಿ ಅಸಮಾಧಾನ, ತಳಮಳ ಹಾಗೂ ಅಸಂತೋಷ ಮತ್ತು ವಿರೋಧಿ ಭಾವನೆ ಉಂಟಾಗುತ್ತವೆ. ಇದರಿಂದ ಅವಳು ಬೇಸರಗೊಂಡು ಮನೆಯಿಂದ ಹೊರಗೆ ಬರುತ್ತಾಳೆ. ಆಗ ಮೆಹತಾ ಅವರು ಅವಳನ್ನು ಸಮಾಧಾನ ಮಾಡಿ ಅವಳ ಸಂಸಾರವನ್ನು ಸರಿ ಮಾಡುವ ಹೊಣೆಯನ್ನು ಹೊತ್ತು ಮನೆಗೆ ವಾಪಸ್ ಕಳಿಸುತ್ತಾರೆ. ಆ ಸಂದರ್ಭದಲ್ಲಿ ಮಾಲತಿಯ ಸ್ವಭಾವವನ್ನು ಕುರಿತು ಗೋವಿಂದಿ ಈ ರೀತಿ ವ್ಯಾಖ್ಯಾನಿಸುತ್ತಾಳೆ. 'ಹೆಣ್ಣು ಹೆಂಗಸಿನ ಹೃದಯ ಬಹಳ ದುರ್ಬಲ. ಮೋಹವೇ ಅವಳ ಪ್ರಾಣ. ಬದುಕಿರುವವರೆಗೂ ಅವಳು ಮೋಹವನ್ನು ಬಿಡಲಾರಳು'[೨೩]. ಇದು ಹೆಣ್ಣಿನ ಒಳತುಡಿತವನ್ನೂ, ಅವಳ ಒಳಗಿನ ಹಂಬಲವನ್ನೂ ತೋರಿಸುತ್ತಿದೆ. ಅದರ ಜೊತೆಗೆ ಇದನ್ನು ಗಮನಿಸಿದವರು ಅದಕ್ಕೆ ಮಾಡುವ ವ್ಯಾಖ್ಯಾನವನ್ನೂ ಕೂಡ ಇದು ವ್ಯಕ್ತಪಡಿಸುತ್ತದೆ.

ಗೋಬರನು ಜುನಿಯಾಳನ್ನು ತನ್ನ ಮನೆಯವರೆಗೆ ತಂದು ಬಿಟ್ಟವನು ನಂತರ ಊರಲ್ಲಿ ಕಾಣೆಯಾಗಿರುತ್ತಾನೆ. ನಂತರ ಎಷ್ಟೋ ದಿನಗಳು ಕಳೆದ ಮೇಲೆ ಮನೆಗೆ ಬರುತ್ತಾನೆ. ಮನೆಗೆ ಬಂದವನು ಊರಿನ ಎಲ್ಲರನ್ನೂ ಭೇಟಿಯಾಗಲು ಹೊರಡುತ್ತಾನೆ. ಹೀಗೆ ಹೊರಟಿದ್ದನ್ನು ಕಾದಂಬರಿಯು 'ಗೋಬರನು ಹಳ್ಳಿಯ ದಿಗ್ವಿಜಯಕ್ಕೆ ಹೊರಟ' ಎಂದು ಮೂರೇ ಪದಗಳಲ್ಲಿ ನಿರೂಪಿಸಿದೆ. ಕೇವಲ ಕೃಷಿ ಗೇಣಿಯನ್ನು ಅವಲಂಬಿಸಿಕೊಂಡು, ಜಮೀನುದಾರರ ಮೇಲೆ ನಿರಂತರವಾಗಿ ಅವಲಂಬಿತನಾಗಿದ್ದ ಹೋರಿ ರಾಮನ ಮಗನು ತಾನು ಹುಟ್ಟಿದ ಊರನ್ನು, ಒಂದು ಹೆಣ್ಣಿನ ಸಂಬಂಧದ ಕಾರಣಕ್ಕೆ ತೊರೆದು ಹೋಗಿದ್ದ. ಅಲ್ಲಿ ಕೃಷಿಯೇತರವಾದ ಬೇರೆ ಕೆಲಸವನ್ನು ಮಾಡಿದ್ದ. ನಂತರ ಊರಿಗೆ ಮರಳಿದ್ದ. ಆ ಕೃಷಿಯೇತರ ದುಡಿಮೆಯೇ ಆತನಲ್ಲಿ ಹೊಸ ಬಗೆಯ ಅರಿವನ್ನು, ಹೊಸ ಬಗೆಯ ತಿಳುವಳಿಕೆಯನ್ನು, ಹೊಸ ಪ್ರಜ್ಞೆಯನ್ನು ಉಂಟುಮಾಡಿತ್ತು. ಅವನ ಕೃಷಿಯೇತರ ಕೆಲಸದ ದುಡಿಮೆಯ ಬಗ್ಗೆ ಯಾರು ಯಾರು ಕುತೂಹಲ ಹಾಗೂ ಆಸಕ್ತಿ ವ್ಯಕ್ತಪಡಿಸಿದರು ಎಂಬುದು ಕಾದಂಬರಿಯಲ್ಲಿ ನಿರೂಪಿತವಾಗಿದೆ. ಅವನು ಬೇರೆಬೇರೆಯವರನ್ನು ಭೇಟಿಯಾದಾಗ ಅನೇಕರು 'ಗೋಬರ ನೀನು ಎಲ್ಲಿದ್ದೆ?, ಏನು ಕೆಲಸ ಮಾಡುತ್ತಿದ್ದೆ?, ನಿನಗೆ ಎಷ್ಟು ಸಂಬಳ ಇತ್ಯಾದಿಯಾಗಿ ಕೇಳುತ್ತಾರೆ. ಜಾತಿಯಲ್ಲಿ ಬ್ರಾಹ್ಮಣನೂ, ಪಂಡಿತನೂ ಆಗಿರುವ ದಾತಾದೀನನು ಗೋಬರನನ್ನು ಕುರಿತು 'ನೀನು ಯಾವ ಕೆಲಸ ಮಾಡುತ್ತೀಯಾ? ನಿನಗೆ ಎಷ್ಟು ಸಂಬಳ? ಅದರಲ್ಲಿ ಎಷ್ಟು ದುಡ್ಡನ್ನು ಕೂಡಿಟ್ಟಿದ್ದೀಯಾ?' ಎಂಬುದಾಗಿ ಕೇಳುತ್ತಾನೆ. ಜೊತೆಗೆ ತನ್ನ ಮಗನಾದ ಮತಾದೀನನಿಗೂ ಅಲ್ಲಿ ಒಂದು ಕೆಲಸ ಕೊಡಿಸು ಎಂಬುದಾಗಿ ಕೋರುತ್ತಾನೆ. ಗೋಬರನು ತಾನು ಮಾಡಿದ್ದ ಕೆಲಸದ ಉತ್ಪಾದನೆಯಿಂದ ದುಡ್ಡನ್ನು ಕೂಡಿಟ್ಟಿದ್ದನೊ ಇಲ್ಲವೊ ಹೇಳಲಾಗದು. ಆದರೆ ಪಾರಂಪರಿಕವಾಗಿ ಯಾವುದಾದರೂ ಮೂಲದಿಂದ ಬಂದ ದುಡ್ಡನ್ನು ಕೂಡಿಡುತ್ತಿದ್ದ ಬ್ರಾಹ್ಮಣನಾದ ದಾತಾದೀನನ ಸ್ವಭಾವ

ಎಂತಹದ್ದು ಎಂಬುದು ಇಲ್ಲಿ ಗೋಚರವಾಗುತ್ತದೆ. ಮತ್ತು ಪಾರಂಪರಿಕವಾಗಿ ಪಂಡಿತನಾಗಿದ್ದ ತನ್ನ ವೃತ್ತಿಯನ್ನು ತನ್ನ ಮಗನು ಬದಲಾಯಿಸಿಕೊಳ್ಳಬಹುದಲ್ಲ ಎಂಬ ಆತನ ಆಸೆಯೂ ಇಲ್ಲಿ ನಿರೂಪಿತವಾಗಿದೆ. ಶ್ರೀಮಂತನಾದ ಪಟೇಶ್ವರಿಯು ಗೋಬರನನ್ನು ಮಾತನಾಡಿಸಿ, 'ತನ್ನ ಮಗನನ್ನು ನೀನಿರುವಲ್ಲಿಗೆ ಕರಕೊಂಡು ಹೋಗಿ ಒಂದು ಕೆಲಸ ಕೊಡಿಸು' ಎಂಬುದಾಗಿ ಕೇಳುತ್ತಾನೆ. ಶ್ರೀಮಂತನಾದ ಝುಂಗಾರಿ ಸಿಂಹ ಸ್ನಾನ ಮಾಡುತ್ತಿರುತ್ತಾನೆ. ಗೋಬರ ಅಲ್ಲೆ ಹೋಗುತ್ತಾನೆ. ಆದರೆ ಗೋಬರ ಅವನಿಗೆ ಸಲಾಮು ಹೊಡೆಯುವುದಿಲ್ಲ. ಆದರೆ ಝುಂಗಾರಿ ಸಿಂಹನೇ ಗೋಬರನನ್ನು ಕುರಿತು 'ಗೋಬರ ನೀನು ಯಾವಾಗ ಬಂದೆ? ಲಕ್ನೋದಲ್ಲಿ ನೀನು ಮಜಾ ಮಾಡಿರಬೇಕಲ್ಲವೆ?' ಎಂದು ಕೇಳುವನು. ಗೋಬರನು ತನ್ನ ದುಡಿಮೆಯ ಹಣದಿಂದ ಮಜಾ ಮಾಡಿದನೊ ಇಲ್ಲವೊ ಗೊತ್ತಿಲ್ಲ. ಆದರೆ ಬೇರೆಯವರ ಶ್ರಮದ ಹಣದಿಂದ ಮಜಾ ಮಾಡುವ ವರ್ಗದವನಾದ ಝಿಂಗಾರಿ ಸಿಂಹನು ಗೋಬರನನ್ನು ಪ್ರಶ್ನೆ ಮಾಡುವ ಮೂಲಕ ತನ್ನ ವರ್ಗ ಸ್ವಭಾವ ಎಂತಹದ್ದು ಎಂಬುದನ್ನು ಹೊರಗೆಡಹುತ್ತಾನೆ. ಇಷ್ಟಾಗಿಯೂ, ಗೋಬರನು ಠಾಕೂರನಿಗೆ ಕಿಲುಬು ಕಾಸಿನ ಬೆಲೆಯನ್ನೂ ಕೊಡಲಿಲ್ಲ. ಇದು ಗೋಬರನ ಒಳಗಿನ ಸ್ವಾಭಿಮಾನದ ಸ್ವಭಾವವನ್ನು ತೋರಿಸುತ್ತದೆ. ಲಕ್ನೋದಿಂದ ವಾಪಸ್ ಊರಿಗೆ ಬಂದ ಗೋಬರನ ಸ್ವಭಾವದಲ್ಲಿ ಸಾಕಷ್ಟು ಬದಲಾವಣೆ ಆಗಿರುತ್ತದೆ. ಈಗ ಅವನಿಗೆ ಹೆಂಡತಿಯಾದ ಜುನಿಯಾಳನ್ನು ತಾನಿರುವಲ್ಲಿಗೆ ಕರೆದುಕೊಂಡು ಹೋಗುವ ಅಪೇಕ್ಷೆ ಉಂಟಾಗಿದೆ. ಇದನ್ನು ಅವನು ತನ್ನ ತಾಯಿಯಲ್ಲಿ ಹೇಳಿದಾಗ ಮೊದಲ ಬಾರಿಗೆ ಧನಿಯಾ ಇದಕ್ಕೆ ಒಪ್ಪುವುದಿಲ್ಲ. ಜುನಿಯಾಳಿಗೆ ಹೋಗಬೇಕೊ ಬೇಡವೊ ಎಂಬುದರ ಬಗೆಗೆ ಯಾವುದೆ ಖಚಿತವಾದ ನಿಲುವು ಇರುವುದಿಲ್ಲ. ಆದರೆ ಗೋಬರನ ಒತ್ತಾಯಕ್ಕೆ ಮಣಿದು ಅವಳು ಹೋಗಲು ಸಿದ್ಧಳಾಗುತ್ತಾಳೆ. ಇದಕ್ಕೆ ಹೋರಿಯ ಒಪ್ಪಿಗೆ ಕೂಡ ಇರುತ್ತದೆ. ಜುನಿಯಾಳು ಗಂಡನ ಜೊತೆ ಹೋಗುವ ತೀರ್ಮಾನ ತೆಗೆದುಕೊಂಡಿದ್ದು ಧನಿಯಾಳಲ್ಲಿ ಬೇರೆಬೇರೆ ಬಗೆಯ ಪ್ರತಿಕ್ರಿಯೆಗಳನ್ನು ಉಂಟುಮಾಡುತ್ತದೆ. ಗೋಬರನಿಗೆ ಈಕೆಯನ್ನು ಅಲ್ಲಿಗೆ ಕರಕೊಂಡು ಹೋಗುವ ಅಪೇಕ್ಷೆ ಇಲ್ಲದಿದ್ದರೂ, ಕೂಡ ಈಕೆಯೇ ಅವನನ್ನು ಒತ್ತಾಯ ಮಾಡಿ ತಾನು ಬರುವುದಾಗಿ ಹಠ ಹಿಡಿದಿದ್ದಾಳೆ ಎಂದು ಧನಿಯಾ ಭಾವಿಸುತ್ತಾಳೆ. ಜೊತೆಗೆ ತನ್ನ ಎದುರಿಗೇ ಆಕೆಯ ಮಗುವಿಗೆ ಹಾಲು ಕೊಡುವುದು, ಸಮಯಕ್ಕೆ ಸರಿಯಾಗಿ ಊಟ ಮಾಡಿಸುವುದನ್ನು ಜುನಿಯಾ ಮಾಡುತ್ತಿರಲಿಲ್ಲ. ಇನ್ನು ಈ ಎಳೆಯ ಹಸುಳೆಯನ್ನು ಈಕೆ ಒಬ್ಬಳೇ ಅಲ್ಲಿಗೆ ಕರೆದುಕೊಂಡು ಹೋದರೆ ಈ ಮಗುವಿನ ಪರಿಸ್ಥಿತಿ ಏನಾಗುತ್ತದೊ ಎಂಬುದಾಗಿ ಧನಿಯಾಳು ಆತಂಕ ಪಡುತ್ತಾಳೆ. ಇಲ್ಲಿ, ಗಂಡನಿಂದ ಕೆಲವು ವರುಷಗಳವರೆಗೆ ದೂರವಿದ್ದ ಜುನಿಯಾಳು ಗಂಡನ ಸಾಮೀಪ್ಯವನ್ನು ಬಯಸಿಯೇ ಅಲ್ಲಿಗೆ ಹೋಗಲು ನಿರ್ಧರಿಸಿರಬಹುದಲ್ಲವೆ? ಎಂಬ ಊಹೆ ಧನಿಯಾಳದ್ದು. ಇದು, ಗಂಡು ಹೆಣ್ಣುಗಳ ಸಂಬಂಧ ಹೇಗಿರಬಹುದು

ಎಂಬುದಾಗಿ ಅತ್ಯಂತ ಆಳವಾಗಿ ಧನಿಯಾಳು ಊಹಿಸಿರಬಹುದಾದ ಮುಂದಾಲೋಚನೆಗೆ ಒಂದು ಉದಾಹರಣೆಯಾಗಿ ಬರುತ್ತದೆ. ಜೊತೆಗೆ ಈಗ ಮೊಮ್ಮಗನಾದ ಮಂಗಳನನ್ನು ಅತ್ಯಂತ ಅಕ್ಕರೆಯಿಂದ ಲಾಲನೆ ಪಾಲನೆ ಮಾಡುವುದರ ಮೂಲಕ ತನ್ನ ಸಂಕಟವನ್ನು ತಾತ್ಕಾಲಿಕವಾಗಿಯಾದರೂ ಮರೆಯುತ್ತಿದ್ದ, ಧನಿಯಾಳಿಗೆ ಆ ಮಗು ತನ್ನಿಂದ ದೂರ ಹೋಗುವುದರ ಮೂಲಕ ತನಗೆ ಬಹಳ ಬೇಸರವಾಗುತ್ತದೆ ಎಂಬ ಸ್ತ್ರೀ ಸಹಜವಾದ ಹಾಗೂ ತಾಯಿತನದ ಸ್ವಭಾವವೂ ವ್ಯಕ್ತವಾಗಿದೆ. ಜೊತೆಗೆ ಜುನಿಯಾಳು ಸ್ವತಃ ಹೊಟ್ಟೆಯಲ್ಲಿ ಹುಟ್ಟಿದ ಮಗುವನ್ನು ಹೇಗೆ ನೋಡಿಕೊಳ್ಳುತ್ತಿದ್ದಳು ಎಂಬುದನ್ನೂ ಪರೋಕ್ಷವಾಗಿ ಅನಾವರಣ ಮಾಡಿದೆ.

ಗೋಬರನು ತನ್ನ ಹೆಂಡತಿ ಜುನಿಯಾಳನ್ನು ತನ್ನ ಹಳ್ಳಿಯಾದ ಬೆಲಾರಿಯಿಂದ ತಾನಿದ್ದ ಲಕ್ನೋಕ್ಕೆ ಕರೆದುಕೊಂಡು ಹೋಗಲು ನಿರ್ಧಾರ ಮಾಡಿದ. ಆದರೆ ಇದಕ್ಕೆ ಇಡೀ ಕುಟುಂಬದ ಒಟ್ಟಾರೆ ಸಹಮತವೇನೂ ಮೂಡುವುದಿಲ್ಲ. ಯಾವುದೊ ಜಗಳ ಉಂಟಾಗಿ ಗೋಬರನು ತನ್ನ ತಂಗಿಯರಿಗೆ ಹೊಡೆಯುತ್ತಾನೆ. ಇದು ಕುಟುಂಬದಲ್ಲಿ ಅಸಮಾಧಾನವನ್ನು ಹಾಗೂ ಕಲಹವನ್ನು ಉಂಟುಮಾಡುತ್ತದೆ. ಇದರಿಂದ ಕುಟುಂಬದ ಪ್ರತಿಯೊಬ್ಬರೂ ಅಸಮಾಧಾನಗೊಳ್ಳುತ್ತಾರೆ. ಇಂತಹ ಅಸಮಾಧಾನದ ವಾತಾವರಣದಲ್ಲೆ ಗೋಬರನು ಹೆಂಡತಿಯನ್ನು ಕರೆದುಕೊಂಡು ಹೊರಡುತ್ತಾನೆ. ಆಗ ಅವನಿಗೆ ಕೌಟುಂಬಿಕ ಸಹಜವಾದ ಯಾವ ಭಾವನಾತ್ಮಕ ಪ್ರತಿಕ್ರಿಯೆಗಳೂ ಸಿಗುವುದಿಲ್ಲ. ಜುನಿಯಾ ಕೂಡ ಒಂದು ಬಗೆಯ ಅಸಮಾಧಾನದಿಂದಲೇ ಹೊರಡುತ್ತಾಳೆ. ಧನಿಯಾಳು ಲಕ್ನೋಕ್ಕೆ ಹೋಗಿ ತನ್ನ ಗಂಡನ ಮನೆಯನ್ನು ಸೇರಿದ ಮೇಲೆ ಅವಳಲ್ಲಿ ಏನೇನು ಬದಲಾವಣೆಗಳು ಮೂಡಿದವು, ಏನೇನು ಭಾವನೆಗಳು ಮೂಡಿದವು ಎಂಬುದನ್ನು ವಿಶದವಾಗಿ ನಿರೂಪಿಸಿದೆ. ಜುನಿಯಾಳಲ್ಲಿ ಆದ ಬದಲಾವಣೆಗೆ ಗೋಬರನ ದುಡಿಮೆಯಲ್ಲಾದ ಬದಲಾವಣೆಯೆ ಮುಖ್ಯ ಕಾರಣವಾಗಿದೆ. ಗೋಬರನು ಊರಿಗೆ ಹೋಗುವ ಮೊದಲು ಇಟ್ಟಿದ್ದ ಗೂಡಂಗಡಿಯನ್ನು ಈಗ ಬೇರೆಯವರು ತಮ್ಮದಾಗಿಸಿಕೊಂಡಿದ್ದರು. ಇದರಿಂದ ಗೋಬರನಿಗೆ ಏಕದಂ ದುಡಿಮೆ ನಿಂತು ಹೋಯಿತು. ಇದರಿಂದ ಗೋಬರನು ಮಾನಸಿಕ ಕ್ಷೋಭೆಗೆ ಒಳಗಾಗುತ್ತಾನೆ. ಬರುವ ಅಲ್ಪಸ್ವಲ್ಪ ದುಡಿಮೆಯ ಹಣದಲ್ಲಿ ಕುಡಿಯುವ ಗೀಳಿಗೆ ಬೀಳುತ್ತಾನೆ. ಇದು ಅವನ ಕುಟುಂಬದ ಅಗತ್ಯಗಳನ್ನು ಸರಿಯಾಗಿ ನಿರ್ವಹಿಸಲು ಬಹಳ ದೊಡ್ಡ ಅಡ್ಡಿಯಾಯಿತು. ಇದರ ನೇರ ದುಷ್ಪರಿಣಾಮವು ಆಗಲೆ ಎರಡನೇ ಗರ್ಭಿಣಿಯಾಗಿದ್ದ ಮತ್ತು ಒಂದು ಎಳೆಯ ಕೂಸನ್ನು ಹೊಂದಿದ್ದ ಜುನಿಯಾಳ ಮೇಲೆ ಆಯಿತು. ಅವಳು ಇಲ್ಲಿಗೆ ಹೊಂದಿಕೊಳ್ಳಲು ಆಗಲಿಲ್ಲ. ಹೊತ್ತಿಗೆ ಸರಿಯಾಗಿ ಊಟದ ಸಮಸ್ಯೆಯೂ ಎದುರಾಯಿತು. ಆಕೆಯ ಮೊದಲ ಎಳೆಯ ಮಗು ಇಲ್ಲಿ ತೀರಿಕೊಂಡಿತು. ಇದು ಜುನಿಯಾಳಲ್ಲಿ ತೀವ್ರವಾದ ಒಂಟಿತನವನ್ನು, ಅಸಹಾಯಕತೆಯನ್ನು, ನಿರಾಸೆಯನ್ನು ಉಂಟುಮಾಡಿತು. ತನ್ನ ಮಗು ಬದುಕಿದ್ದಾಗ ಆ ಮಗುವನ್ನು ಜುನಿಯಾಳು

ನೋಡುತ್ತಿದ್ದ ಬಗೆಯೇ ಬೇರೆ. ಆದರೆ ಆ ಮಗು ತೀರಿಕೊಂಡ ಮೇಲೆ ಆ ಮಗುವಿನ ಬಗೆಗಿನ ಅವಳ ಮಮತೆಯೇ ಬೇರೆ. ಆ ಮಗುವಿನ ನೆನಪು ಅವಳಲ್ಲಿ ಯಾವ ಭಾವನೆಗಳನ್ನು ಉಂಟು ಮಾಡಿತು ಎಂಬುದನ್ನು ಕಾದಂಬರಿಯು ತುಂಬಾ ಗಂಭೀರವಾಗಿ ನಿರೂಪಿಸಿದೆ. 'ಈಗ ಜುನಿಯಾಳಿಗೆ ಮಗನಾದ ಲಲ್ಲೂವಿನ ನೆನಪು ಲಲ್ಲೂವಿಗಿಂತ ಪ್ರಿಯವಾಗಿತ್ತು. ಲಲ್ಲೂ ಅವಳ ಕಣ್ಣೆದುರು ಇದ್ದಾಗ ಅವನಿಂದ ಅವಳಿಗೆ ಸುಖಕ್ಕಿಂತ ಕಷ್ಟವೇ ಹೆಚ್ಚು ಉಂಟಾಗುತ್ತಿತ್ತು. ಈಗ ಲಲ್ಲೂ ಅವಳ ಮನಸ್ಸಿನಲ್ಲಿ ಬಂದು ಕುಳಿತುಬಿಟ್ಟಿದ್ದ. ಶಾಂತ, ಸ್ಥಿರ, ಸುಶೀಲ, ಸ್ನೇಹಸಿಕ್ತ ಮೂರ್ತಿಯಾಗಿದ್ದ ಅವನು ಅವಳ ಕಲ್ಪನೆಯಲ್ಲಿ ಈಗ ವೇದನಾಮಯವಾದ ಆನಂದವಿತ್ತು. ಅದರಲ್ಲಿ ಪ್ರತ್ಯಕ್ಷದ ಕಪ್ಪು ನೆರಳಿರಲಿಲ್ಲ. ಹೊರಗಿನ ಲಲ್ಲೂ ಅವಳ ಒಳಗಿನ ಲಲ್ಲೂವಿನ ಪ್ರತಿಬಿಂಬ ಮಾತ್ರವಾಗಿದ್ದ. ಅಸತ್ಯವೂ, ಅಸ್ಥಿರವೂ ಆದ ಪ್ರತಿಬಿಂಬ ಅವಳ ಕಣ್ಣ ಮುಂದೆ ಇರಲಿಲ್ಲ. ಅವಳ ಆಸೆಗಳು ಹಾಗೂ ಶುಭೇಚ್ಛೆಗಳಿಂದ ರೂಪುಗೊಂಡ ಸತ್ಯರೂಪ ಅವಳ ಒಳಗಿತ್ತು. ಹಾಲಿಗೆ ಬದಲಾಗಿ ಅವಳ ರಕ್ತವನ್ನೆ ಕುಡಿಸಿ ಅವನನ್ನು ಪೋಷಿಸುತ್ತಿದ್ದಳು'[೨೪]. ಕಾದಂಬರಿಯ ಮೇಲಿನ ಮಾತುಗಳು ಜುನಿಯಾಳ ಕೌಟುಂಬಿಕ ಸಂಕಟಗಳನ್ನು, ಅವಳ ಆರ್ಥಿಕ ಪರಿಸ್ಥಿತಿಯನ್ನು ಪ್ರಕಟಪಡಿಸುತ್ತಿವೆ. ಅಷ್ಟಲ್ಲದೆ ಮಗು ಇದ್ದಾಗ ಅವಳು ಅದರೊಂದಿಗೆ ಬೆರೆಯುತ್ತಿದ್ದ ರೀತಿಯನ್ನೂ, ಮಗು ತೀರಿಕೊಂಡ ಮೇಲೆ ಅದರ ನೆನಪು ಅವಳನ್ನು ತೀವ್ರವಾಗಿ ಕಾಡುತ್ತಿದ್ದ ರೀತಿಯನ್ನೂ ಏಕಕಾಲಕ್ಕೆ ಅನಾವರಣ ಮಾಡಿವೆ. ಇದಕ್ಕೆ ಹಿನ್ನೆಲೆಯಾಗಿದ್ದ ಗೋಬರನ ಆರ್ಥಿಕ ಪರಿಸ್ಥಿತಿ, ಆತನ ಕುಡಿತ ಹಾಗೂ ನಿರ್ದಯವಾದ ವರ್ತನೆಗಳು ಅವಳಲ್ಲಿ ಇನ್ನಿಲ್ಲದ ಅಭದ್ರತೆ ಹಾಗೂ ಅಸಹಾಯಕತೆಯನ್ನು ಉಂಟುಮಾಡಿತು.

ಗೋಬರನು ತನ್ನ ಹೆಂಡತಿಯಾದ ಜುನಿಯಾಳನ್ನು ಲಕ್ನೋಕ್ಕೆ ಕರೆದುಕೊಂಡು ಹೋದನು. ನಂತರ ಧನಿಯಾಳಿಗೆ ಅದುವರೆಗೆ ತನ್ನ ಮೊಮ್ಮಗುವಿನೊಂದಿಗೆ ಆಡುತ್ತಿದ್ದ ಆ ಉಲ್ಲಾದ ಕ್ಷಣಗಳು ಇಲ್ಲವಾದವು. ಅವಳ ಇಡೀ ಮನೆ ಅವಳಿಗೆ ಬಹಳ ಬೇಸರ ಉಂಟುಮಾಡಿತು. ಆ ಸನ್ನಿವೇಶವನ್ನು ಅವಳಿಗೆ ಸಹಿಸಿಕೊಳ್ಳಲು ಆಗಲಿಲ್ಲ. ಆಗ ಧನಿಯಾಳು 'ಆ ರಾಕ್ಷಸಿ ಬಂದು ಅವಳ ಚಿನ್ನದಂತಹ ಸಂಸಾರವನ್ನು ನಾಶ ಮಾಡಿ ಬಿಟ್ಟಳು. ಗೋಬರ ಎಂದೂ ಅವಳ ಮಾತಿಗೆ ಪ್ರತಿ ಆಡಿದವನೆ ಅಲ್ಲ. ಈ ಮುಂಡೆಯೇ ಅವಳನ್ನು ತನ್ನ ಬಲೆಗೆ ಹಾಕಿಕೊಂಡು ಅವಳಿಂದ ದೂರ ಮಾಡಿದಳು. ಈಗ ಅಲ್ಲಿಗೆ ಕರೆದುಕೊಂಡು ಹೋಗಿ ಅವನನ್ನು ಅದೆಷ್ಟು ಕುಣಿಸುತ್ತಾಳೊ! ಇಲ್ಲಿ ಅವಳು ಮಗುವನ್ನು ಸರಿಯಾಗಿ ನೋಡಿಕೊಳ್ಳುತ್ತಿರಲಿಲ್ಲ. ಅವಳಿಗಂತೂ ಯಾವಾಗಲೂ ತನ್ನ ಕಾಡಿಗೆ ಬೈತಲೆ ಹಾಗೂ ಜಡೆಯ ಸಿಂಗಾರದ ಚಿಂತೆ. ಅವಳಂತೂ ಖಂಡಿತ ಆ ಮಗುವನ್ನು ನೋಡಿಕೊಳ್ಳುವುದಿಲ್ಲ. ಪಾಪ ಆ ಏನೂ ಅರಿಯದ ಹಸುಳೆ ನೆಲದ ಮೇಲೆ ಬಿದ್ದುಕೊಂಡು ಅಳುತ್ತಿರುತ್ತದೆ. ಪಾಪ ಅದಕ್ಕಂತೂ ಒಂದೇ ಒಂದು ದಿನವೂ ಸುಖ ಸಿಗುವುದಿಲ್ಲ. ಒಮ್ಮೆ ಕೆಮ್ಮು, ಇನ್ನೊಮ್ಮೆ ಬೇದಿ, ಮಗದೊಮ್ಮೆ ಇನ್ನೇನೊ.

ಇದನ್ನು ಯೋಚಿಸಿದಂತೆಲ್ಲ ಅವಳಿಗೆ ಜುನಿಯಾಳ ಮೇಲೆ ಸಿಟ್ಟು ಬರುತಿತ್ತು'[೨೫]. ಇದು ಧನಿಯಾಳು ಎಳೆಯ ಮಗುವಿನ ಮೇಲೆ ಇಟ್ಟಿರುವ ಕಾಳಜಿ ಹಾಗೂ ಮಮತೆಯನ್ನೂ, ಎಳೆ ಮಗುವನ್ನು ತಾಯಿಯಾದವಳು ಹೇಗೆ ರಕ್ಷಿಸಬೇಕು ಎಂಬುದರ ಜವಾಬ್ದಾರಿಯನ್ನೂ ಸೂಚಿಸುತ್ತಿದೆ. ಜೊತೆಗೆ ತನ್ನ ಸೊಸೆಯಾದ ಜುನಿಯಾಳು ತಾಯಿಯಾಗಿ ಆ ಮಗುವನ್ನು ಜೋಪಾನವಾಗಿ ನೋಡಿಕೊಳ್ಳಲಾರಳೊ ಏನೊ ಎಂಬ ಸಹಜವಾದ ಆತಂಕವನ್ನೂ ಸೂಚಿಸುತ್ತಿದೆ. ಈ ಮೂಲಕ ಧನಿಯಾಳ ಅತ್ಯಂತ ಸಹಜವಾದ ತಾಯಿತನವನ್ನೂ ಪ್ರಕಟಿಸುತ್ತಿದೆ.

ಹೋರಿ ರಾಮನ ಮಗಳಾದ ಸೋನಾಳ ಮದುವೆಯ ಪ್ರಯತ್ನ ನಡೆಯುತ್ತದೆ. ಅದಕ್ಕೆ ಹೋರಿಯಲ್ಲಿ ಹಣವಿರುವುದಿಲ್ಲ. ಇನ್ನು ಉಳಿದಿರುವ ದಾರಿ ಎಂದರೆ ಯಾರಲ್ಲಾದರೂ ಸಾಲ ಮಾಡುವುದು ಅಷ್ಟೆ. ಈ ಸಂದರ್ಭದಲ್ಲಿ ನೋಹರಿಯು ತಾನು ಸಾಲ ಕೊಡುವುದಾಗಿ ಹೇಳುತ್ತಾಳೆ. ಆಗ 'ಹೋರಿಯ ಮನಸ್ಸಿನಲ್ಲಿ ದುರಾಸೆ ಹುಟ್ಟಿತು. ದೇವರು ತನಗೆ ತಾನೆ ಹಣ ಕೊಟ್ಟಿರುವಾಗ ಎಷ್ಟು ಸಾಧ್ಯವೊ ಅಷ್ಟನ್ನು ಯಾಕೆ ತೆಗೆದುಕೊಳ್ಳಬಾರದು! ನೂರು ರೂಪಾಯಿಯಲ್ಲೂ ಮದುವೆಯಾಗುತ್ತದೆ. ಐನೂರರಲ್ಲೂ ಆಗುತ್ತದೆ. ನಮ್ಮ ಶಕ್ತಿ ಇದ್ದಷ್ಟು, ನನ್ನ ಹತ್ತಿರ ಒಟ್ಟು ಇನ್ನೂರು ರೂಪಾಯಿ ಇದೆ. ಅದನ್ನು ನಾನು ಕೊಟ್ಟುಬಿಡುತ್ತೇನೆ. ಹಾಗಾದರೆ ಇಷ್ಟರಲ್ಲಿ ಬಹಳ ಖುಷಿಯಾಗಿ ಮದುವೆ ನಡೆದುಹೋಗುತ್ತದೆ. ದಸವ ಧಾನ್ಯ ಮನೆಯಲ್ಲಿದೆ. ಆದರೆ ನೋಹರಿ ಇಂದು ನಾನು ನಿಮ್ಮ ಹತ್ತಿರ ಕೇಳುತ್ತಿದ್ದೇನೆ. ನಾನು ನೀವು ಇಂತಹ ಲಚಮಿ ಎಂದು ತಿಳಿದಿರಲಿಲ್ಲ. ಈ ಕಾಲದಲ್ಲಿ ಯಾರು ಯಾರಿಗೆ ಸಹಾಯ ಮಾಡುವುದಿಲ್ಲ. ಹಾಗೆ ಮಾಡಲು ಯಾರ ಪತ್ತಿರವೂ ಹಣ ಇಲ್ಲವಲ್ಲ? ನೀವು ಮುಳುಗುತ್ತಿದ್ದ ನನ್ನನ್ನು ಉಳಿಸಿದಿರಿ'[೨೬]. ಇಲ್ಲಿ ಒಂದು ಕಡೆ ನೋಹರಿಯ ಸ್ವಭಾವವೂ ಮತ್ತೊಂದು ಕಡೆ ಹೋರಿಯ ಸ್ವಭಾವವೂ ಪ್ರಕಟವಾಗಿದೆ. ನೋಹರಿಯ ಸ್ವಭಾವದ ಆಯಾಮವೆಂದರೆ ಅದು, ಆಕೆಗೂ ಮತ್ತು ನೋಖೇರಾಮನ ನಡುವಿನ ಸಂಬಂಧದ ಬಗ್ಗೆ ಕೆಲವು ಕಡೆ ತೆಳುವಾದ ಅಪಸ್ವರಗಳು ಇದ್ದವು. ಈಗ ಅದನ್ನು ಮುಚ್ಚಿಟ್ಟುಕೊಳ್ಳುವಂತೆ ಮಾಡುವ ಅಥವಾ ಅದನ್ನು ಯಾವುದಾದರೂ ಬಗೆಯಲ್ಲಿ ಸಹನೀಯವಾಗಿ ನೋಡುವಂತೆ ಮಾಡುವ ಸ್ವಭಾವ ನೋಹರಿಯದು. ಆದರೆ ಹೋರಿಯ ಸ್ವಭಾವವೇ ಬೇರೆ ರೀತಿಯದ್ದು. ನೋಹರಿ ಹಾಗೂ ನೋಖೇರಾಮರ ನಡುವಿನ ಸಂಬಂಧದ ಬಗ್ಗೆ ಯಾವುದೊ ಆಳದಲ್ಲಿ ಹೋರಿಗೆ ಸ್ಪಷ್ಟವಾದ ಭಿನ್ನಮತವಿದೆ. ಆ ಕಾರಣದಿಂದ ಅಂತವರ ದುಡ್ಡನ್ನು ತೆಗೆದುಕೊಳ್ಳಲು ಅವನಿಗೆ ಮನಸ್ಸಿಲ್ಲ. ಆದರೆ ಅದನ್ನು ತೆಗೆದುಕೊಳ್ಳದೆ ಬೇರೆ ದಾರಿ ಇಲ್ಲ. ಈ ಇಕ್ಕಟ್ಟಿನಲ್ಲಿ ಅವನು ಸಿಲುಕಿದ್ದಾನೆ. ಇಂತಹ ಸಂದರ್ಭದಲ್ಲಿ ಅನಿವಾರ್ಯವಾಗಿ ದುಡ್ಡು ತೆಗೆದುಕೊಳ್ಳುವ ತೀರ್ಮಾನ ಮಾಡುತ್ತಾನೆ. ಅಂದರೆ ಆರ್ಥಿಕ ಪರಿಸ್ಥಿತಿ ಒತ್ತಡವೇ ಮನುಷ್ಯರ ಸ್ವಭಾವ ಹಾಗೂ ಅವರ ಮನೋಭಾವಗಳನ್ನು

ನಿರ್ಧರಿಸುತ್ತದೆ ಎಂಬ ಬಹಳ ಸೂಕ್ಷ್ಮವಾದ ಒಂದು ನೋಟವನ್ನು ಈ ಸನ್ನಿವೇಶವು ಕಟ್ಟಿಕೊಟ್ಟಿದೆ.

ಚುಹಿಯಾ ಕಟ್ಟಿಗೆ ಮಾರುವವಳು. ಜುನಿಯಾಳು ಎರಡನೇ ಸಲ ಗರ್ಭಿಣಿಯಾದಾಗ ಅವಳನ್ನು ಜಾಗರೂಕತೆಯಿಂದ ನೋಡಿಕೊಂಡವಳು. ಹೆರಿಗೆ ಸಮಯದಲ್ಲಿ ದಾದಿಯರನ್ನು ಹುಡುಕಿದಾಗ ಯಾರೂ ಸಿಗಲಿಲ್ಲ. ಕೊನೆಗೆ ಚುಹಿಯಾಳೇ ಆ ಕೆಲಸವನ್ನು ಮುತುವರ್ಜಿಯಿಂದ ಮಾಡುವಳು. ಜುನಿಯಾಳ ಮಗುವಿಗೆ ತನ್ನ ಎದೆ ಹಾಲನ್ನು ಕೊಡುತ್ತಾಳೆ. ಹೀಗೆ ಚುಹಿಯಾಳು ಜುನಿಯಾಳ ಮನೆಗೆ ಬಂದು ಹೋಗುತ್ತಿದ್ದಳು. ಇದನ್ನು ಕಂಡು ಗೋಬರ ಚುಹಿಯಾಗೆ ನಮ್ಮ ಮನೆಗೆ ಬರಬೇಡ ಎಂದು ಬೈದನು. ಅದಕ್ಕೆ ಚುಹಿಯಾಳು 'ಈ ಸೂಳೆ ಮಗ ಹೇಳುತ್ತಿದ್ದಾನೆ. ನನ್ನ ಮನೆಗೆ ಬರಬೇಡ ಎಂದು. ಇವನಿಗೆ ಹೆಂಡತಿ ಬೇಕು. ಮಕ್ಕಳು ಬೇಕು. ಆದರೆ ಹೆಂಡತಿ ಮಕ್ಕಳನ್ನು ಸಾಕುವುದು ಸಾಮಾನ್ಯವಲ್ಲ. ನಾನೇನಾದರೂ ನಿನ್ನ ಹೆಂಡತಿಯಾಗಿದ್ದರೆ ಈ ಎಕ್ಕಡವನ್ನು ತೆಗೆದುಕೊಂಡು ಮುಖಕ್ಕೆ ಪಟಾಪಟ ಎಂದು ಬಾರಿಸುತ್ತಿದ್ದೆ'[೨೭]. ಚುಹಿಯಾಳ ಈ ಮಾತುಗಳಲ್ಲಿ ಕೌಟುಂಬಿಕ ಸಂಬಂಧದಲ್ಲಿ ಗಂಡಸನಾದವನ ಜವಾಬ್ದಾರಿ ಹೇಗಿರಬೇಕು ಎಂಬ ಬಗ್ಗೆ ತೀವ್ರ ಕಾಳಜಿ ಇದೆಯಲ್ಲದೆ, ತಮ್ಮ ಜವಾಬ್ದಾರಿಯನ್ನು ನಿರ್ವಹಿಸದವರ ಬಗ್ಗೆ ತೀವ್ರವಾದ ಆಕ್ರೋಶವೂ ವ್ಯಕ್ತವಾಗಿದೆ.

ಹೋರಿ ಮತ್ತು ಧನಿಯಾಳು ಮಾತಾಡುತ್ತಿದ್ದಾಗ, ಹೀರಾನ ಪ್ರಸ್ತಾಪ ಬರುತ್ತದೆ. ಆಗ ಧನಿಯಾಳು ಹೀರನು ಹಣ್ಣವನ್ನು ಹೂತಿಟ್ಟಿದ್ದಾನೆ ಎಂದು ಛೇಡಿಸುತ್ತಾಳೆ. ಇದರಿಂದ ಹೋರಿಯು ವ್ಯಗ್ರನಾಗಿ ಹೇಳುವನು. 'ವ್ಯವಸಾಯದಿಂದ ಹೊಟ್ಟೆ ತುಂಬಿದರೆ ಅದೇ ದೊಡ್ಡದು. ಎಲ್ಲಿಂದ ಹೂತಿಡಲು ಸಾಧ್ಯ!. ನನ್ನ ಮನಸ್ಸಂತೂ ಹೇಳುತ್ತಿದೆ. ಅವನು ಬಂದೇ ಬರುತ್ತಾನೆ. ಎಂದಾದರೂ ಅವನು ಖಂಡಿತಾ ಬಂದೇ ಬರುತ್ತಾನೆ ಎಂದು. ಮರುದಿನ ಬೆಳಗಾದಾಗ ಹೋರಿಯ ನಿರೀಕ್ಷೆಯಂತೆ ಹೀರಾ ಬಂದೇಬಿಟ್ಟಿದ್ದ. ಅವನು ಸಂತೋಷದಿಂದ ತಮ್ಮನ್ನು ಉಪಚರಿಸಿದ. ಹೀರಾನು ತನ್ನ ಅಣ್ಣನಿಗೆ ಮೋಸ ಮಾಡಿದ ಫಲವಾಗಿ ಶಿಕ್ಷೆಯನ್ನು ಅನುಭವಿಸಿ, ಪಶ್ಚಾತ್ತಾಪದಿಂದ ಅಣ್ಣನಲ್ಲಿ ಕ್ಷಮೆ ಯಾಚಿಸುವನು. ಹೋರಿಯು ತಮ್ಮನನ್ನು ಹತ್ತಿರಕ್ಕೆ ಕರದುಕೊಂಡು ಸಮಾಧಾನ ಪಡಿಸಿ ಮನುಷ್ಯ ತಪ್ಪು ಮಾಡುವುದು ಸಹಜ ಎಂದು ಹೇಳುವನು'[೨೮]. ಮೇಲಿನ ಪ್ರಸಂಗವು ಮನುಷ್ಯರಿಗೆ ಎಂತಹ ಸಂದರ್ಭದಲ್ಲಾದರೂ ರಕ್ತ ಸಂಬಂಧವು ಬಹಳ ಗಟ್ಟಿಯಾದುದು ಮತ್ತು ಪವಿತ್ರವಾದುದು. ಅದರಲ್ಲಿ ಮನಸ್ಸಿನ ಕಲ್ಮಷಗಳು ಇರುವುದಿಲ್ಲ. ಜೊತೆಗೆ ಪಶ್ಚಾತ್ತಾಪ ಎಂಬುದು ಹೊರಗಿನ್ನ ಒತ್ತಡದಿಂದಲೊ ಅಥವಾ ಯಾವುದಾದರೂ ರೂಪದ ಶಿಕ್ಷೆಯ ರೂಪದಲ್ಲಿಯೊ ಕಾಡಬೇಕಿಲ್ಲ. ಅದು ರಕ್ತ ಸಂಬಂಧದ ವಿನ್ಯಾಸದಲ್ಲೆ ತಾನು ಮಾಡಿದ ತಪ್ಪನ್ನು ಅವರ ಅರಿವಿಗೆ ತರುತ್ತದೆ ಎಂಬ ಮಾನವ ಸ್ವಭಾವವನ್ನು ಶೋಧಿಸಿದೆ.

'ಗೋದಾನ' ಕಾದಂಬರಿಯಲ್ಲಿ ಮಾನವ ಸ್ವಭಾವಗಳ ಶೋಧವು ಬಹುಮುಖಿಯಾಗಿ ಕ್ರಿಯಾಶೀಲವಾಗಿದೆ. ಅದು ಕೇವಲ ಮೇಲು ವರ್ಗಗಳ ವಿರೋಧವಾಗಿಯೊ ಅಥವಾ ತಳ ವರ್ಗಗಳ ಪರವಾಗಿಯೋ ಸರಳವಾದ ವಿನ್ಯಾಸವನ್ನು ಹೊಂದಿಲ್ಲ. ಬದಲಿಗೆ ಎರಡೂ ವರ್ಗಗಳಲ್ಲಿ ಬದುಕಿನ ಬೇರೆಬೇರೆ ಸಂದರ್ಭಗಳಲ್ಲಿ ಯಾವ ಬಗೆಯ ಮನೋಭಾವಗಳು ಹಾಗೂ ಸ್ವಭಾವಗಳು ಉಂಟಾಗುತ್ತವೆ ಎಂಬುದನ್ನು ಸೂಕ್ಷ್ಮವಾಗಿ ಶೋಧಿಸಿದೆ.

**ಕೊನೆ ಟಿಪ್ಪಣಿ**

೧. ಪುಟ ೧೧
೨. ಪುಟ ೧೪
೩. ಪುಟ ೧೭
೪. ಪುಟ ೨೦,೨೧
೫. ಪುಟ ೨೦, ೨೧
೬. ಪುಟ ೨೧
೭. ಪುಟ ೩೮
೮. ಪುಟ ೪೫
೯. ಪುಟ ೧೫೦
೧೦. ಪುಟ ೫೭
೧೧. ಪುಟ ೫೭
೧೨. ಪುಟ ೧೩೬, ೧೩೭
೧೩. ಪುಟ ೫೯
೧೪. ಪುಟ ೬೬
೧೫. ಪುಟ ೧೧೬
೧೬. ಪುಟ ೧೩೯
೧೭. ಪುಟ ೧೩೯
೧೮. ಪುಟ ೧೪೦, ೧೪೧, ೧೪೫, ೧೪೭
೧೯. ಪುಟ ೧೪೭
೨೦. ಪುಟ ೧೬೨
೨೧. ಪುಟ ೩೬೬
೨೨. ಪುಟ ೩೬೬
೨೩. ಪುಟ ೩೬೮
೨೪. ಪುಟ ೩೭೨
೨೫. ಪುಟ ೩೮೪
೨೬. ಪುಟ ೩೯೦
೨೭. ಪುಟ ೪೮೯
೨೮. ಪುಟ ೪೫೦

## ಅಧ್ಯಾಯ ೬

### ಶೋಷಿತಪರ ಆಲೋಚನೆಗಳು

'ಗೋದಾನ' ಕಾದಂಬರಿಯಲ್ಲಿ ಶೋಷಿತಪರ ಆಲೋಚನೆಗಳನ್ನು ಶೋಧಿಸುವುದು ನಿರ್ದಿಷ್ಟವಾಗಿ ಈ ಅಧ್ಯಾಯದ ಉದ್ದೇಶವಾಗಿದೆ. ಹಾಗೆ ನೋಡಿದರೆ ಸಮಾಜವಾದಿ ಲೇಖಕರಾಗಿರುವ ಪ್ರೇಮ್‌ಚಂದ್ ಅವರ ಈ ಕಾದಂಬರಿ ಇಡಿಯಾಗಿ ತನಗೆ ತಾನೇ ಒಂದು ಶೋಷಿತಪರ ಹಿತಾಸಕ್ತಿಯುಳ್ಳದ್ದು ಎಂದು ಹೇಳಿಬಿಡಬಹುದು. ಆದರೆ 'ಗೋದಾನ'ವು ಒಂದು ಸಾಹಿತ್ಯ ಕೃತಿಯಾಗಿ ಹಾಗೂ ಅದು ಒಂದು ಕಾದಂಬರಿಯಾಗಿ ಹೇಗೆ ಶೋಷಿತಪರ ಆಲೋಚನೆಗಳನ್ನು ನಿರೂಪಿಸಿದೆ ಎಂಬುದನ್ನು ಇಡೀ ಕಾದಂಬರಿಯ ಒಳಗೆ ಬಹಳ ಸೂಕ್ಷ್ಮವಾಗಿ ಹುಡುಕಬೇಕಾಗುತ್ತದೆ. ಶೋಷಿತಪರ ಆಲೋಚನೆ ಎಂಬುದು ಕೇವಲ ಹೇಳಿಕೆಗಳ ಮಟ್ಟದಲ್ಲೊ, ಘೋಷಣೆಗಳ ಮಟ್ಟದಲ್ಲೊ ಸಾಹಿತ್ಯ ಕೃತಿಗಳಲ್ಲಿ ನಿರೂಪಿತವಾಗಿರುವುದಿಲ್ಲ. ಸಾಹಿತ್ಯ ಕೃತಿಗಳ ಅಧ್ಯಯನದಲ್ಲಿ ಇದು ಬಹಳ ಮುಖ್ಯವಾದ ಒಂದು ಆಯಾಮ. ಒಂದು ವೇಳೆ ಸಾಹಿತ್ಯ ಕೃತಿಗಳನ್ನು ಘೋಷಣೆಯ ಮಟ್ಟದಲ್ಲೊ, ಹೇಳಿಕೆಗಳ ಮಟ್ಟದಲ್ಲೋ ಓದುತ್ತೇವೆ ಎನ್ನುವುದಾದರೆ ಆ ಚರ್ಚೆಯ ಸ್ವರೂಪವೇ ಬೇರೆ. ಆದರೆ ಒಂದು ಕಾದಂಬರಿಯಲ್ಲೊ, ಕತೆಯಲ್ಲೊ ಅಥವಾ ಇನ್ಯಾವುದೆ ಸಾಹಿತ್ಯ ಕೃತಿಯಲ್ಲೊ ಶೋಷಿತಪರ ಆಲೋಚನೆ ಎಂಬುದು ಸಿದ್ಧಮಾದರಿಯ ಹೇಳಿಕೆಗಳ ರೂಪದಲ್ಲಿ ಇರುವುದಿಲ್ಲ. ಅದು ಪಾತ್ರಗಳ ವರ್ತನೆಯಲ್ಲೊ, ಪಾತ್ರಗಳ ಬೆಳವಣಿಗೆಯಲ್ಲೊ, ಸಂಭಾಷಣೆಗಳ ಸ್ವರೂಪದಲ್ಲೊ, ಸನ್ನಿವೇಶಗಳ ನಿರ್ಮಾಣದಲ್ಲೊ ಒಂದು ಸೃಜನಶೀಲ ಪ್ರಕ್ರಿಯೆಯಾಗಿ ಕೆಲಸ ಮಾಡುತ್ತದೆ. ಈ ಹಿನ್ನೆಲೆಯಲ್ಲಿ 'ಗೋದಾನ' ಕಾದಂಬರಿ ಇಡಿಯಾಗಿ ಒಂದು ಶೋಷಿತಪರ ಆಲೋಚನೆಗಳನ್ನು ನಿರೂಪಿಸಿದೆ ಎಂದು ಸರಳವಾಗಿ ಹೇಳಿಕೆ ಮಾಡುವುದು ಬೇರೆ. ಆದರೆ ಈ ಶೋಷಿತಪರ ಎಂಬುದು ಒಂದು ಹಿತಾಸಕ್ತಿಯಾಗಿ, ಒಂದು ದೃಷ್ಟಿಕೋನವಾಗಿ ಮತ್ತು ನಿರೂಪಣೆಯಲ್ಲಿ ಒಂದು ಸ್ವಭಾವವಾಗಿ ಹೇಗೆ ಒಡಮೂಡಿದೆ ಎಂಬುದನ್ನು ಗುರುತಿಸುವುದು ಬೇರೆ. ಈ ದೃಷ್ಟಿಕೋನದಲ್ಲಿ ಕಾದಂಬರಿಯ ಕೆಲವು ಸನ್ನಿವೇಶಗಳನ್ನು ಉಲ್ಲೇಖಿಸುವುದರ ಮೂಲಕವೆ, ಆಯಾ ಸನ್ನಿವೇಶಗಳ ಮೂಲಕ ನಿರೂಪಿತವಾಗುವ ಶೋಷಿತಪರ ಆಲೋಚನೆಗಳ ವಿವಿಧ ವಿನ್ಯಾಸಗಳನ್ನು ಪರಿಶೀಲಿಸಲಾಗುವುದು.

ಕಾದಂಬರಿಯ ಆರಂಭದಲ್ಲೆ ಹೋರಿ ರಾಮನ ಅಪೇಕ್ಷೆ ಏನಾಗಿತ್ತು ಎಂಬುದರ ಬಗೆಗೆ ಅದರಲ್ಲೂ ಅವನ ಇಡೀ ಬದುಕಿನ ಆಸೆ ಏನಾಗಿತ್ತು ಎಂಬುದರ ಬಗೆಗೆ ಈ ಬಗೆಯ ನಿರೂಪಣೆ ಬರುತ್ತದೆ. 'ಪ್ರತಿಯೊಬ್ಬ ಗೃಹಸ್ಥನಂತೆ ಬಹಳ ದಿನಗಳಿಂದ ಹೋರಿಗೆ ಒಂದು ಹಸುವನ್ನು ಸಾಕಬೇಕು ಎಂಬ ಲಾಲಸೆ ಇತ್ತು. ಇದೇ ಅವನ ಬದುಕಿನ ದೊಡ್ಡ ಕನಸೂ, ದೊಡ್ಡ ಧ್ಯೇಯವೂ ಆಗಿತ್ತು. ಬ್ಯಾಂಕಿನ ಬಡ್ಡಿಯಿಂದ ಆರಾಮ ಬದುಕು ಸಾಗಿಸುವ ಅಥವಾ ಜಮೀನನ್ನು ಖರೀದಿಸುವ ಅಥವಾ ಭವನ

ತಟ್ಟಿಸುವ ದೊಡ್ಡ ದೊಡ್ಡ ಆಕಾಂಕ್ಷೆಗಳು ಅವನ ಆ ಪುಟ್ಟ ಹೃದಯದಲ್ಲಿ ಬರಲು ಸಾಧ್ಯವೇ ಇರಲಿಲ್ಲ'[1]. ಶೋಷಿತಪರ ಆಲೋಚನೆಗಳ ಹಿನ್ನೆಲೆಯಲ್ಲಿ ಈ ಸಾಲುಗಳನ್ನು ಗಮನಿಸಿದಾಗ, ನಮಗೆ ಬಡವರ ಜೀವನದ ದಾರುಣತೆಯ ನೋಟ ಅರಿವಾಗುತ್ತದೆ. ಹಾಗೆ ಬಡವರಲ್ಲಿ ಆಸೆ ಆಕಾಂಕ್ಷೆಗಳು ಯಾವ ರೂಪದಲ್ಲಿ ಇರುತ್ತವೆ ಅವು ಸರಳ ರೂಪದಲ್ಲಿದ್ದರೂ ಈಡೇರಿಸಿಕೊಳ್ಳಲಾರದ ಪರಿಸ್ಥಿತಿ ಇತ್ತು. ರೈತನ ಜಮೀನು ಹಾಗೂ ಭವನ ಕಟ್ಟುವ ಆಸೆ ಆ ಪುಟ್ಟ ಹೃದಯದಲ್ಲಿ ಬರಲು ಸಾಧ್ಯವಾಗುವುದಿಲ್ಲ. ಅಲ್ಲದೆ ಬಡವರನ್ನು ಶ್ರೀಮಂತರು ಶೋಷಣೆ ಮಾಡುವ ಸೂಕ್ಷ್ಮಾತಿ ಸೂಕ್ಷ್ಮ ಎಳೆಗಳು ನಮಗೆ ಗೋಚರವಾಗುತ್ತವೆ. ಸಮಾಜದಲ್ಲಿ ಬಡ ರೈತನ ಕಷ್ಟ ಹಾಗೂ ನೋವಿನ ಚಿತ್ರಣವನ್ನು ಈ ಸಾಲುಗಳು ಪ್ರತಿಬಿಂಬಿಸುತ್ತವೆ.

ಹೋರಿರಾಮನು ತನ್ನ ಬಡ್ಡಿ ಸಾಲದ ಬಗ್ಗೆಯೂ ಚಿಂತಿಸಿ ಶ್ರೀಮಂತರು ಬಡ್ಡಿಗೆ ಬಡ್ಡಿ ಸೇರಿಸಿ ಬಡವರನ್ನು ಶೊಷಣೆ ಮಾಡುವುದರ ಒಂದು ಆಲೋಚನೆಯನ್ನು ಹೋರಿರಾಮ ಈ ರೀತಿಯಾಗಿ ಹೇಳಿಕೊಳ್ಳುವನು. 'ಒಂದು ರೂಪಾಯಿಗೆ ಒಂದು ಆಣೆ ಬಡ್ಡಿ. ಅದು ಹೆಚ್ಚಾಗುತ್ತಲೇ ಹೋಗುತ್ತಿದೆ. ಆದರೆ ದಾರಿದ್ರ್ಯದಲ್ಲಿ ಒಂದು ರೀತಿಯ ಮುಂದಾಲೋಚನೆ ಇಲ್ಲದಿರುವಿಕೆ ಇರುತ್ತದೆ'[2]. ಈ ಸಾಲುಗಳು ಶ್ರೀಮಂತರಿಂದ ತೊಂದರೆಗೊಳಗಾಗಿ ನೊಂದುಕೊಂಡು ಪ್ರಸ್ತಾಪ ಮಾಡುವ ನಿದರ್ಶನವನ್ನು ಸ್ಪಷ್ಟವಾಗಿ ಹೇಳುತ್ತವೆ. ಶ್ರೀಮಂತರು ಬಡವರಿಗೆ ಒಂದು ರೂಪಾಯಿಗೆ ಒಂದು ಆಣೆ ಬಡ್ಡಿ ಹಾಕಿ, ಬಡ ರೈತರು ಹಾಗೂ ಹೋರಿರಾಮನು ಅನಕ್ಷರಸ್ಥರು ಆಗಿದ್ದರಿಂದ ಹೆಚ್ಚಿನ ಬಡ್ಡಿಯನ್ನು ಹಾಕಿ ಕೊನೆಗೆ ಅವರು ಬಡ್ಡಿಯನ್ನೇ ತೀರಿಸಲು ಹೋರಾಟ ಮಾಡುವರು. ಕೊನೆಗೆ ಬಡ್ಡಿ ತೀರಿಸಲು ಆಗದೆ ರೈತರು ತಮ್ಮ ಆಸ್ತಿ ಪಾಸ್ತಿಯನ್ನು ಕಳೆದುಕೊಳ್ಳುವ ಸಂದರ್ಭಗಳು ಇದ್ದವು. ಆದರೆ ಶ್ರೀಮಂತರನ್ನು ಶೋಷಣೆಗೆ ಗುರಿಪಡಿಸುವ ವರ್ಗವು ಒಂದು ಇದೆ ಎಂದು ತಿಳಿಯುತ್ತದೆ. ಬಡವರಿಗೆ ಕಷ್ಟ ಬಂದರೆ ಶ್ರೀಮಂತರ ಮೊರೆ ಹೋಗುವಂತೆ; ಶ್ರೀಮಂತರಿಗೆ ಕಷ್ಟ, ನೋವು, ಸಮಸ್ಯೆಗಳಾದಾಗ ಅವರು ಇನ್ನೊಬ್ಬರನ್ನು ಆಶ್ರಯಿಸಬೇಕಾಗುತ್ತದೆ. ಗೋದಾನ ಕಾದಂಬರಿಯಲ್ಲಿ ಶ್ರೀಮಂತರಿಗೂ ತಮ್ಮದೇ ಆದ ಕಷ್ಟದ ಪರಿಸ್ಥಿತಿಗಳು ಇರುತ್ತವೆ ಎಂಬುದನ್ನು ಚಿತ್ರಿಸಲಾಗಿದೆ. ಆದ್ದರಿಂದ ಶ್ರೀಮಂತರು ಸಮಾಜದಲ್ಲಿನ ಅಧಿಕಾರಿ ವರ್ಗದವರಿಂದ ಶೋಷಣೆಗೆ ಒಳಪಡುತ್ತಾರೆ ಎಂಬುದನ್ನು ರಾಯಸಾಹೇಬನು ಹೋರಿರಾಮನ ಮುಂದೆ ಪ್ರತ್ಯಕ್ಷವಾಗಿ ಹೇಳಿಕೊಳ್ಳುತ್ತಾನೆ.

ಹೋರಿಯು ತನ್ನ ಮಗನಾದ ಗೋಬರನ ವಿದ್ರೋಹಿ ಭಾವನೆಗೆ ಈ ರೀತಿ ಹೇಳುವನು. 'ಸಲಾಮು ಹೊಡೆಯಲು ಹೋಗದಿದ್ದರೆ ಬದುಕು ನಡೆಸುವುದಾದರೂ ಎಲ್ಲಿ? ದೇವರು ನಮ್ಮನ್ನು ಗುಲಾಮರನ್ನಾಗಿ ಮಾಡಿರುವಾಗ ನಮ್ಮದೇನು ನಡೆಯುತ್ತದೆ? ಈ ಸಲಾಮಿಯ ಕೈಯಿಂದಲೇ ಇಂದು ನಾವು ನಮ್ಮ ಬಾಗಿಲಲ್ಲಿ ಗುಡಿಸಲು ಹಾಕಿಕೊಂಡಿದ್ದೇವೆ'[3].

ಕಾದಂಬರಿಯ ಈ ಸಾಲುಗ್ಗಳು ಅತ್ಯಂತ ಸೂಕ್ಷ್ಮವಾಗಿ ರೈತರು ಗೇಣಿದಾರರ ಕೈಯಿಂದ ಶೋಷಣೆಗೆ ಒಳಗಾಗುತ್ತಾರೆ ಎಂಬುದನ್ನು ಸೂಚಿಸುತ್ತಿದೆ. ಶ್ರೀಮಂತರೊಂದಿಗೆ ನಯ ವಿನಯದಿಂದ ನಡೆದುಕೊಳ್ಳಬೇಕು. ಅವರು ಹೇಳಿದಂತೆ ಕೇಳಬೇಕು. ಇಲ್ಲವಾದರೆ ಬಡವರು ಹಾಗೂ ಹೋರಿಯು ಹಳ್ಳಿಯಲ್ಲಿ ಜೀವನ ಮಾಡುವುದು ಕಷ್ಟದ ಕೆಲಸ ಎಂಬುದು ತಿಳಿಯುತ್ತದೆ. ಶ್ರೀಮಂತರ ಕೃಪೆಗೆ ಹೋರಿ ಪಾತ್ರನಾಗಲು ಹೊರಟರೆ ಹೋರಿಯ ಮಗ ಅದನ್ನು ವಿರೋಧಿಸುವನು. ಆದರೆ ಹೋರಿರಾಮನು ಸಾಮಾಜಿಕ ವ್ಯವಸ್ಥೆ, ಕಟ್ಟುಪಾಡಿನಲ್ಲಿ ಬದುಕಲು ಇಚ್ಛಿಸುವುದರಿಂದ ಶ್ರೀಮಂತರ ಮೊರೆ ಹೋಗುವನು. ಹಾಗೂ ಅವರ ಪ್ರೀತಿ, ಕೃಪೆಗೆ, ದಯೆಗೆ ಪಾತ್ರನಾಗಲು ಬಯಸುವನು. ಆದರೆ ಇಲ್ಲಿ ಹೇಗೇ ನಡೆದುಕೊಂಡರೂ ಗೇಣಿಯಲ್ಲಿ ಹಾಗೂ ಇನ್ನಿತರೆ ವಿಷಯಗಳಲ್ಲಿ ರಿಯಾಯಿತಿ ಮಾತ್ರ ಸಿಗುತ್ತಿರಲಿಲ್ಲ. ಆದ್ದರಿಂದ ತಂದೆಯ ಈ ಗುಲಾಮತನದ ಸ್ವಭಾವವನ್ನು ಸಂಪೂರ್ಣವಾಗಿ ಖಂಡಿಸುತ್ತಾನೆ. ಶ್ರೀಮಂತರು ಯಾವಾಗಲೂ ಬಿಟ್ಟಿ ಕೆಲಸದೊಂದಿಗೆ, ಬಿಟ್ಟಿ ಮಾತಿನೊಂದಿಗೆ ಹೊಟ್ಟೆ ತುಂಬಿಸುವ ಜನರು ಎಂದು ಶ್ರೀಮಂತರು ಬಗ್ಗೆ ಗೋಬರನು ಅಸಮಾಧಾನ, ಅತೃಪ್ತಿ ವ್ಯಕ್ತಪಡಿಸುವನು. ಹಾಗೂ ಅವರಿಂದ ಶೋಷಣೆಯನ್ನು ತಡೆದುಕೊಳ್ಳಲಾರದೆ ವಿರೋಧ ಭಾವವನ್ನು ಪ್ರಕಟಿಸುವನು. ಇಲ್ಲಿ ಸಮಾಜದ ವ್ಯವಸ್ಥೆ ಹಾಗೂ ಶ್ರೀಮಂತರ ದಬ್ಬಾಳಿಕೆಯನ್ನು ಹೋರಿಯು ಮಾತ್ರ ಮೌನವಾಗಿ ಸಹಿಸಿಕೊಂಡಂತೆ ಮಗನೂ ಸಹ ಸಹಿಸಿಕೊಳ್ಳುವಂತೆ, ಹೋರಿಯು ಮಗನನ್ನು ಒತ್ತಾಯಿಸುವನು. ಹೋರಿಯ ಆ ವಿಚಾರಗಳು ಹಾಗೂ ಅವನ ಸ್ವಭಾವವು ಶೋಷಿತಪರ ಆಲೋಚನೆಯನ್ನು ನಿರೂಪಿಸುತ್ತವೆ.

ಕಾದಂಬರಿಯ ಮುಂದಿನ ಭಾಗದಲ್ಲಿ ಶ್ರೀಮಂತರು ಬಡವರನ್ನು ಶೋಷಣೆ ಮಾಡಿದರೆ; ಶ್ರೀಮಂತರೂ ಕೂಡ ಬೇರೊಂದು ವರ್ಗದ ಕಪಿಮುಷ್ಠಿಯಲ್ಲಿ ಇರುವಂತಹ ವರ್ಗ ಶ್ರೇಣೀಕರಣಗಳ ಸಂಕೀರ್ಣವನ್ನು ಜಮೀನ್ದಾರನಾದ ರಾಯಸಾಹೇಬ ಹೇಳಿಕೊಳ್ಳುವುದನ್ನು ಕಾದಂಬರಿಯು ನಿರೂಪಿಸಿದೆ. 'ಆಹಾಕಾರದಿಂದ ನಮ್ಮನ್ನು ಉಳಿಸಿಕೊಳ್ಳಲು ನಾವು ಪೊಲೀಸಿನವರ, ಶಾಸಕರ, ನ್ಯಾಯಸ್ಥಾನದ, ವಕೀಲರ ಮೊರೆ ಹೋಗುತ್ತೇವೆ ಹಾಗು ಸುಂದರ ಸ್ತ್ರೀಯಂತೆ ಎಲ್ಲರ ಕೈಯ ಆಟಿಕೆಯಾಗುತ್ತೇವೆ'[9].

ಕಾದಂಬರಿಯ ಉದ್ದಕ್ಕೂ ಬಡ ರೈತರ ಹಾಗೂ ಹೋರಿರಾಮನ ಶೋಷಣೆ ಮಾಡುವುದನ್ನು ಕಾಣುತ್ತಾ ಬಂದ ನಮಗೆ; ಶ್ರೀಮಂತರು ಸಹ ತಮ್ಮ ಅವಶ್ಯಕತೆಗೆ ಹಾಗೂ ಅವರ ರಕ್ಷಣೆಗಾಗಿ ಬೇರೆಯವರ ಕೈಯಿಂದ ಶೋಷಣೆಗೆ ಒಳಗಾಗುವರು ಎಂಬುದು ಈ ಸಾಲುಗಳ ಮೂಲಕ ತಿಳಿಯುತ್ತದೆ. ಈ ಸಾಲುಗಳು ಶೋಷಿತರ ಪರಿಸ್ಥಿತಿಯನ್ನೂ, ಅವರ ನೋವಿನ ಆಯಾಮಗಳನ್ನೂ ತೆರೆದುತೋರಿಸುತ್ತವೆ. ಶ್ರೀಮಂತರದು ಸುಖ, ವೈಭವ, ವಿಲಾಸ ಹಾಗೂ ಲೋಲುಪತೆಯ ವೈಭವದ ಬದುಕು

ಆಗಿರುತ್ತದೆ ಎಂಬುದು ಆ ಶ್ರೀಮಂತ ವರ್ಗವನ್ನು ಹೊರಗಿನಿಂದ ನೋಡುವ ದೃಷ್ಟಿಕೋನಕ್ಕೆ ಸಿಗುವ ಬಹಳ ಸರಳವಾದ ಚಿತ್ರಣ. ಆದರೆ ಸಮಾಜವಾದಿ ಸೃಜನಶೀಲ ಸಾಹಿತ್ಯ ಕೃತಿಯೊಂದು ಸಮಾಜವನ್ನು ಹೀಗೆ ಕೇವಲ ಒಮ್ಮುಖ ದೃಷ್ಟಿಯ ಮೂಲಕ ಹೊರಗಿನಿಂದ ನೋಡುವುದಿಲ್ಲ. ಅದು ಸಮಾಜದ ಎಲ್ಲಾ ವರ್ಗಗಳ ಬದುಕಿನ ನಾನಾ ಸಮಸ್ಯೆಗಳನ್ನು, ಅವರ ನಾನಾ ತಾಕಲಾಟಗಳನ್ನು, ಆಯಾ ವರ್ಗಕ್ಕೆ ಇರಬಹುದಾದ ಇಕ್ಕಟ್ಟುಗಳನ್ನು ಎಲ್ಲಿಯೂ ಸರಳಗೊಳಿಸದೆ ಸೂಕ್ಷ್ಮವಾಗಿ ನಿರೂಪಿಸುತ್ತದೆ.

ಹೋರಿರಾಮನು ಶೋಷಿತ ವರ್ಗಕ್ಕೆ ಸೇರಿದ್ದು, ಇವನು ಶ್ರೀಮಂತರ ಶೋಷಣೆಗೆ ತನ್ನ ಬದುಕನ್ನೇ ಮುಡುಪಾಗಿಡುವನು. ಹೋರಿರಾಮನು ಶ್ರೀಮಂತರ ಕೃಪೆಗಾಗಿ ರಾಯಸಾಹೇಬನಾದ (ಶ್ರೀಮಂತ) ಜಮೀನುದಾರನ ಮನೆಗೆ ಹೋಗಿ ಬರುವನು. ಆದರೆ ಹೋರಿಯ ಮಗನಾದ ಗೋಬರನು ಅದಕ್ಕೆ ವಿರೋಧಿಸುವನು. ಆದರೆ ಶ್ರೀಮಂತರನ್ನು ಈ ರೀತಿಯಾಗಿ ಅಲಕ್ಷ್ಯ ಮಾಡಿದರೆ ಹಳ್ಳಿಯಲ್ಲಿ ತುಂಬ ಕಷ್ಟ ಎಂದು ಮಗನಿಗೆ ಬುದ್ಧಿ ಹೇಳುವನು. ಶ್ರೀಮಂತರ ಬಗ್ಗೆ, ಬಡವರ ಸ್ಥಿತಿ ಹೇಗೆ ಇರುತ್ತದೆ ಎಂಬುದರ ಬಗ್ಗೆ ಹಾಗೂ ಅವರೊಂದಿಗೆ ಯಾವ ರೀತಿ ನಡೆದುಕೊಳ್ಳಬೇಕು ಎಂಬುದರ ಬಗ್ಗೆ ಈ ಕೆಳಗಿನ ಸಾಲುಗಳು ನಿರೂಪಿಸುತ್ತವೆ.

'ಮಗ ಗೋಬರ, ಹೀಗೆ ತಿಳಿಯಬೇಡಪ್ಪ. ಚಿಕ್ಕವರು ದೊಡ್ಡವರು ಎನ್ನವುದು ದೇವರಿಂದಲೇ ಆಗಿ ಬಂದಿದೆಯಪ್ಪ. ಬಹಳ ತಪಗೈದರೆ ಸಂಪತ್ತು ಸಿಗುತ್ತದೆ. ಅವರು ಹಿಂದಿನ ಜನುಮದಲ್ಲಿ ಮಾಡಿರುವ ಪುಣ್ಯದ ಫಲ ಈಗ ಅವರಿಗೆ ಖುಷಿ ತಂದುಕೊಟ್ಟಿದೆ. ಅದನ್ನು ಅವರು ಉಣ್ಣುತ್ತಿದ್ದಾರೆ. ನಾವು ಏನನ್ನೂ ಸಂಚಯಿಸಿಲ್ಲ. ಹೀಗಿರುವಾಗ ಅನುಭವಿಸುವುದಾದರು ಏನನ್ನು?'[3] ಈ ಸಾಲುಗಳು ಸಂಪೂರ್ಣವಾಗಿ ಬಡವರು ಶ್ರೀಮಂತರ ಕಪಿಮುಷ್ಠಿಯಲ್ಲಿ ಬದುಕುವುದನ್ನು ನಿರೂಪಿಸುತ್ತವೆ. ಶ್ರೀಮಂತರು ಬಡವರು ಎಂಬ ವಿಂಗಡಣೆ ಕೇವಲ ಮನಸ್ಸಿಗೆ ಸಮಾಧಾನ ಉಂಟು ಮಾಡುವ ಮಾತೆ ಹೊರತು, ಯಾರೂ ಶ್ರೀಮಂತರಾಗಲು ಯಾವ ದೇವರನ್ನು ಬೇಡಿಕೊಂಡಿರುವುದಿಲ್ಲ. ಯಾವ ತಪವನ್ನೂ ಮಾಡಿರುವುದಿಲ್ಲ. ಇಲ್ಲಿ ದೇವರು ಶ್ರೀಮಂತರನ್ನು ಹಾಗೂ ಬಡವರನ್ನು ಪ್ರತ್ಯೇಕ ಪ್ರತ್ಯೇಕವಾಗಿ ಸೃಷ್ಟಿ ಮಾಡುವುದಿಲ್ಲ. ಆದರೆ ಭೂಮಿಯ ಮೇಲಿರುವ ಬಡವರು ಹಾಗೂ ಶ್ರೀಮಂತರು ಎಂಬ ವರ್ಗಗಳು ಹಾಗೂ ಬಡವರನ್ನು ಶ್ರೀಮಂತರು ಶೋಷಣೆ ಮಾಡುವುದನ್ನು ಮನುಷ್ಯರೆ ನಿರ್ಮಾಣ ಮಾಡಿದ್ದಾರೆಯೇ ಹೊರತು ದೇವರಲ್ಲ ಎಂಬ ವಿಚಾರವನ್ನು ಕಾದಂಬರಿಯು ಬಹಳ ಗಟ್ಟಿಯಾಗಿ ಪ್ರತಿಪಾದನೆ ಮಾಡುತ್ತಿದೆ. ಮಾನವರಿಂದಲೇ ಮಾನವರ ಶೋಷಣೆ ಶುರುವಾಗಿದೆ. ಕೆಲವು ಮನುಷ್ಯರನ್ನು ಉಳಿದವರು ಶೋಷಣೆ ಮಾಡಿ, ದಬ್ಬಾಳಿಕೆ ಮಾಡಿ ಬದುಕಲು ದೇವರು ಯಾವ ತತ್ವವನ್ನೂ ಹೇಳಿಲ್ಲ; ಯಾವ ಉಪದೇಶವನ್ನೂ ಮಾಡಿಲ್ಲ. ಆದರೆ ಮಾನವರಿಂದ ಮಾನವರ ಶೋಷಣೆಯನ್ನು ಮುಂದುವರಿಸಿಕೊಂಡು ಹೋಗಲು ಶೋಷಕ ವರ್ಗವು ತನ್ನ ಹಿತಾಸಕ್ತಿಗೆ ಬೇಕಾದ ಹಾಗೂ ತನ್ನ ವರ್ಗ

ಧೋರಣೆಯನ್ನು ಒಪ್ಪುವಂತಹ ಮೌಲ್ಯಗಳನ್ನು, ನಂಬಿಕೆಗಳನ್ನು ಹುಟ್ಟುಹಾಕಿ ಅವನ್ನು ಕಾರ್ಮಿಕ ವರ್ಗದ ಮೇಲೆ ಹರಿಯಬಿಟ್ಟಿದೆ. ಆ ಮೌಲ್ಯಗಳನ್ನು, ಆ ನಂಬಿಕೆಗಳನ್ನು ಶೋಷಕರು ಪಾಲಿಸಿದರೆ ಮಾತ್ರ ಅವರಿಗೆ ಮೋಕ್ಷ ಎಂಬ ನಂಬಿಕೆಯನ್ನು ಸಮಾಜದಲ್ಲಿ ಬೇರೂರಿಸಲಾಗಿದೆ. ಹೋರಿರಾಮನಂತಹ ಸಾಮಾನ್ಯ ರೈತರು ಹಾಗೂ ಕಾರ್ಮಿಕ ವರ್ಗವು ಶೋಷಕ ವರ್ಗದಿಂದ ಹುಟ್ಟಿರುವ ಈ ಬಗೆಯ ಆಲೋಚನೆಗಳನ್ನು ನಂಬಿ ನಡೆಯುವಂತೆ ಒತ್ತಾಯಿಸುತ್ತದೆ. ಗೋದಾನ ಕಾದಂಬರಿಯು ಈ ಬಗೆಯ ಅಸಾಮಾನ್ಯ ಸೂಕ್ಷ್ಮಗಳನ್ನು ಅತ್ಯಂತ ಸಹಜವಾಗಿ ನಿರೂಪಿಸುತ್ತ ಹೋಗುತ್ತದೆ.

'ಆ ಇಬ್ಬರು ಅತ್ತಿಗೆಯರೂ ಹಗಲು, ರಾತ್ರಿ ಅವಳನ್ನು ಗೋಳು ಹೊಯ್ಯುತ್ತಾರೆ. ಮನೆಯಲ್ಲಿ ಯಾವಾಗಲೂ ನೋಡಿದರೂ ಮಹಾಭಾರತ ನಡೆಯುತ್ತಿರುತ್ತದೆ. ಪಾಪ ಕಷ್ಟಕ್ಕೆ ಸಿಲುಕಿಕೊಂಡು ಇಲ್ಲಿಗೆ ಬಂದಳು. ಆದರೆ ಇಲ್ಲೂ ಅವಳಿಗೆ ನೆಮ್ಮದಿ ಇಲ್ಲ'[೬]. ಕಾದಂಬರಿಯ ಈ ಸಾಲುಗಳು ಒಂದು ಹೆಣ್ಣು ಮಗಳನ್ನು ತನ್ನವರೇ ಶೋಷಣೆಗೆ ಗುರಿಮಾಡುವ ಸನ್ನಿವೇಶವನ್ನು ನಿರೂಪಿಸುತ್ತಿವೆ. ಬಡವರನ್ನು ಶ್ರೀಮಂತರು ಶೋಷಣೆ ಮಾಡುವುದಲ್ಲ. ತನ್ನ ತನ್ನವರೇ ಈ ರೀತಿಯಾಗಿ ಶೋಷಣೆ ಮಾಡುವುದು ಕಾಣುತ್ತದೆ. ಆಶ್ರಯವಿಲ್ಲದ ಹೆಣ್ಣನ್ನು ತನ್ನ ರಕ್ತ ಸಂಬಂಧಿಗಳೇ ಗೋಳು ಹಾಕಿಕೊಳ್ಳುವುದು, ಒಬ್ಬ ತಂದೆ ತನ್ನ ಮಗಳ ಸ್ಥಿತಿಯ ಬಗ್ಗೆ ನಡೆದುಕೊಳ್ಳುವ ರೀತಿಯನ್ನು ಈ ಸಾಲುಗಳು ಬಹಳ ಸೂಕ್ಷ್ಮವಾಗಿ ಪ್ರತಿಬಿಂಬಿಸುತ್ತವೆ.

'ಯಾರಿಗೆ ಗೊತ್ತು, ನನ್ನ ಕೈಗೆ ಒಂದು ಪುಡಿಗಾಸು ಬಂದರೂ ಹಳ್ಳಿಯಲ್ಲಿ ಗುಲ್ಲೆದ್ದು ಬಿಡುತ್ತದೆ ಹಾಗೂ ಸಾಲ ಕೊಟ್ಟವರು ಬಂದು ನಾಲ್ಕು ಕಡೆಯಿಂದ ಕಿತ್ತು ತಿನ್ನಲಾರಂಭಿಸುತ್ತಾರೆ'[೭].

ಹೋರಿರಾಮನಿಗೆ ತನ್ನ ಸಮಸ್ಯೆಗಳನ್ನೇ ಬಗೆಹರಿಸಿಕೊಳ್ಳಲು ಆಗುವುದಿಲ್ಲ. ಇವರ ಕೈಗೆ ಸ್ವಲ್ಪ ಹಣ ಬಂದರೆ ಅದನ್ನು ಶ್ರೀಮಂತರಿಂದ ಪಡೆದ ಸಾಲಕ್ಕೆ ಬಡ್ಡಿ ತೀರಿಸಲಾಗುವುದಿಲ್ಲ ಎಂದು ಬೇಸರಗೊಳ್ಳುವನು. ಶ್ರೀಮಂತರು ಒಂದು ರೂಪಾಯಿಗೆ ಒಂದು ಆಣೆ ಬಡ್ಡಿಯಂತೆ ಬಡ ರೈತರ ತಲೆ ಮೇಲೆ ಸಾಲ ಹಾಕಿ ಅವರ ಕೈಯಿಗೆ ಸ್ವಲ್ಪ ಹಣವು ಬಂದರೆ ಸಾಕು ಶ್ರೀಮಂತರು ಬಡವರ ಕೈಯಲ್ಲಿನ ಎಲ್ಲಾ ಹಣವನ್ನು ಕಿತ್ತುಕೊಂಡು ಅವರನ್ನು ಹಿಂಸಿಸುವುದು ಬಡವರ ಕಷ್ಟ ನಷ್ಟಗಳ ಬಗ್ಗೆ ಯೋಚಿಸದೇ ಶ್ರೀಮಂತರು ತಮ್ಮ ಸಾಲ ಹ್ಾಗೂ ಬಡ್ಡಿಯನ್ನು ಕಿತ್ತುಕೊಳ್ಳುವುದೆ ಅವರ ಜಾಯಮಾನವಾಗಿದೆ. ಈ ಸಾಲುಗಳು ಶ್ರೀಮಂತರು ಸಾಲ ಕೊಟ್ಟು ಶೋಷಣೆ ಮಾಡುತ್ತಾರೆ ಎಂಬುದನ್ನು ತಿಳಿಸುತ್ತವೆ.

ಸಂಪತ್ತು ಎಂಬುದು ಕೇವಲ ಅದು ಆರ್ಥಿಕ ಸಂಗತಿಯಲ್ಲ; ಅದು ಆರ್ಥಿಕ ಸಂಗತಿಯಾಗಿರುವ ಹೊತ್ತಿನಲ್ಲೆ ಸಾಮಾಜಿಕವಾದ ಅಸಾಮಾನ್ಯ ಪರಿಣಾಮಗಳನ್ನು ಉಂಟುಮಾಡುತ್ತದೆ. ಆ ಪರಿಣಾಮಗಳು ಸಾಮಾಜಿಕ ಸ್ವಭಾವಗಳಾಗಿ ರೂಪಾಂತರ ಪಡೆಯುತ್ತವೆ ಎಂಬ ಸಂಗತಿಯನ್ನು ಸಮಾಜವಾದಿ ಕಾದಂಬರಿಯಾದ ಗೋದಾನವು

ಈ ಮುಂದಿನ ಸಾಲುಗಳಲ್ಲಿ ನಿರೂಪಿಸಿರುವುದನ್ನು ಕಾಣಬಹುದು. 'ಸಂಪತ್ತು ಮನುಷ್ಯನನ್ನು ಸ್ವಾರ್ಥಿಯನ್ನಾಗಿಯೂ, ಮೋಸಗಾರನನ್ನಾಗಿಯೂ, ಮತ್ತು ವಿಲಾಸಿಯನ್ನಾಗಿಯೂ, ಮಾನಗೆಟ್ಟವನನ್ನಾಗಿಯೂ ಮಾಡಿಸಿಬಿಡುತ್ತದೆ'[೮]. ಸಂಪತ್ತು ಎಂಬುದು ವ್ಯಕ್ತಿಯನ್ನು ಕಣ್ಣು ಇದ್ದು ಕುರುಡನಂತೆ ಮಾಡಿಬಿಡುತ್ತದೆ. ತನ್ನ ಸುಖವನ್ನು ಬಯಸುವಂತೆ ವ್ಯಕ್ತಿಯನ್ನು ಪ್ರೇರೇಪಿಸುತ್ತದೆ. ಶ್ರೀಮಂತರು ತಮ್ಮ ದೋಷವನ್ನು ಈ ರೀತಿಯಾಗಿ ಬಹಿರಂಗಪಡಿಸುವ , ಸನ್ನಿವೇಶವು ಅವರ ನೈತಿಕತೆಯು ಕೆಟ್ಟು ಹೋಗಿರುವುದಕ್ಕೆ ಅವರು ಸಂಪತ್ತಿಗೆ ಒಡೆಯರಾಗಿರುವುದೇ ಕಾರಣ ಎಂಬುದನ್ನು ಹೇಳುತ್ತಿದೆ. ಹಣ ಸಂಪತ್ತು ಇದ್ದವನು ಮೋಜು, ಹೆಂಡ, ಹೆಣ್ಣು ಅಂತ ವಿಲಾಸಿ ಜೀವನ ಮಾಡುವರು. ಇದರಿಂದಲೂ ಇಲ್ಲಿ ಶೋಷಿತನು ಶೋಷಕರ ಬಗ್ಗೆ ಯೋಚನೆ ಮಾಡುವುದು ಈ ಸಾಲುಗಳಲ್ಲಿ ನಿರೂಪಿತವಾಗಿದೆ.

'ನಾವು ಯಾರ ಹತ್ತಿರವೂ ಸಾಲ ಮಾಡಬೇಕಾದದ್ದೇನಿಲ್ಲ. ಯಾರಾದರೂ ಕೊಟ್ಟರೆ ಅವನ ಹತ್ತಿರವೆ ತೆಗೆದುಕೊ. ನಾನಂತು ಒಂದು ದುಮ್ಮಡಿಯನ್ನು ಕೊಡುವುದಿಲ್ಲ. ನಾನು ಕೋರ್ಟಿನ ಬಾಗಿಲು ಹತ್ತಬೇಕಾಗಿ ಬಂದರೂ ಸರಿ. ನಾವು ಬಾಕಿ ತೀರಿಸಲು ಇಪ್ಪತ್ತೈದು ರೂಪಾಯಿ ಕೇಳಿದಾಗ ಯಾವೊಬ್ಬನು ಕೊಡಲಿಲ್ಲ. ಇಂದು ಕೈ ಭರ್ತಿ ಠಣ ಠಣ ಶಬ್ದವನ್ನು ಮಾಡುವ ಹಣವನ್ನು ತೆಗೆದುಕೊಟ್ಟು ಬಿಟ್ಟಿರಲ್ಲ. ನನಗೆ ಎಲ್ಲಾ ಗೊತ್ತು, ಇದೆಲ್ಲಾ ಪಾಲಾಗುವ ಪಣ. ಎಲ್ಲರ ಬಾಯಿಯೂ ಸಿಹಿಯಾಗುತ್ತಿತ್ತು. ಈ ಕೊಲೆಗಡುಕರು ಹಳ್ಳಿಯ ಮುಖ್ಯಸ್ಥರು, ಪಾಪಿಗಳು ಗರೀಬರ ರಕ್ತ ಹೀರುವವರು. ಬಡ್ಡಿ ಬಡ್ಡಿಯ ಮೇಲಿನ ಬಡ್ಡಿ ಕಾಣಿಕೆ, ನಜರು, ಲಂಚ ಗಿಂಚ ಯಾವುದೇ ರೀತಿಯಲ್ಲಿ ಗರೀಬರನ್ನು ದೋಚುವುದು. ಇಷ್ಟು ಮಾಡಿ ಇವರಿಗೆ ಬೇಕು ಸ್ವ ರಾಜ್ಯ. ಜೈಲಿಗೆ ಕಳುಹಿಸುವುದರಿಂದ ಸ್ವರಾಜ್ಯ ಸಿಗುವುದಿಲ್ಲ. ಅದು ಸಿಗುವುದು ಧರ್ಮದಿಂದ ನ್ಯಾಯದಿಂದ'[೯].

ಮೇಲಿನ ಸಾಲುಗಳು ಹೋರಿರಾಮನ ಹೆಂಡತಿ ಧನಿಯಾಳವು. ಮೇಲಿನ ಸಾಲುಗಳ ಮೂಲಕ ಕಾದಂಬರಿಯು ನಿರೂಪಿಸಲು ಪ್ರಯತ್ನಿಸುತ್ತಿರುವುದು ಏನೆಂದರೆ, ಹೆಣ್ಣೊಬ್ಬಳ ಸ್ವತಂತ್ರವಾದ ಆಲೋಚನೆಗಳು. ಆ ಆಲೋಚನೆಗಳ ಮೂಲಕ ಆರ್ಥಿಕ ಶೋಷಣೆಯ ವಿಕೃತ ಮುಖಗಳ ಅನಾವರಣ. ಜೊತೆಗೆ ಸ್ವರಾಜ್ಯ ಸ್ಥಾಪನೆಯ ಹೆಸರಿನಲ್ಲಿ ಜಮೀನ್ದಾರಿ ವರ್ಗ ಮಾಡುತ್ತಿರುವ ವಿಕೃತಿಗಳು. ಶೋಷಿತರ ಪರವಾದ ಈ ವಿಚಾರಗಳನ್ನು ಕಾದಂಬರಿಯು ಒಂದು ಆಯಾಮದಲ್ಲಿ ಪ್ರಜ್ಞಾಪೂರ್ವಕ ವಾಗಿಯೇ, ಅತ್ಯಂತ ಮುಗ್ಧನೂ, ಜಮೀನ್ದಾರಿ ಶೋಷಣೆಗೆ ಒಗ್ಗಿಹೋಗಿರುವ ಹೋರಿರಾಮನ ಹೆಂಡತಿಯ ಮೂಲಕ ನಿರೂಪಿಸುತ್ತಿದೆ. ಈ ಬಗೆಯ ನಿರೂಪಣೆಯ ಹಿಂದೆ ಇಲ್ಲಿ ಸಮಾಜವಾದಿ ಸೃಜನಶೀಲತೆಗೆ ಮತ್ತೊಂದು ಆಸಕ್ತಿಯೂ ಇದ್ದಂತಿದೆ. ಅದು ಯಾವುದು ಎಂದರೆ ಶೋಷಣೆಯ ಬಗೆಗಿನ ಪ್ರಜ್ಞೆ ಹಾಗೂ ಅದರ ವಿರೋಧವು ಪುರುಷರಿಗಿಂತ ಹೆಚ್ಚಾಗಿ ಮಹಿಳಾ ಲೋಕದ ಮೂಲಕ ಜಾಗೃತಗೊಳ್ಳಬೇಕಾದ

ಅಗತ್ಯವನ್ನು ಇದು ಒತ್ತಿ ಹೇಳುತ್ತಿರುವಂತೆ ಕಾಣುತ್ತದೆ. ಇದರ ಸೃಜನಶೀಲ ಬೆಳವಣಿಗೆಯನ್ನು ಕಾದಂಬರಿಯು ಮತ್ತೊಂದು ಸಂದರ್ಭದಲ್ಲಿ ನಿರೂಪಿಸಿರುವ ಸನ್ನಿವೇಶವನ್ನು ಕಾಣಬಹುದು. ಅದಕ್ಕೆ ಈ ಮುಂದಿನ ಉಲ್ಲೇಖವನ್ನು ಗಮನಿಸಬಹುದು. 'ಧನಿಯಾಳಿಗೆ ವಿಪರೀತ ಕೋಪ ಬಂತು. ಅವಳು ಹೇಳುದಳು. ಇವರು ಪಂಚರಲ್ಲ ರಾಕ್ಷಸರು. ಇವರೆಲ್ಲಾ ನಮ್ಮ ಮನೆ, ಜಮೀನುನ್ನು ಕಿತ್ತುಕೊಂಡು ನಮ್ಮ ಆಸ್ತಿ ಹೊಡೆದುಕೊಳ್ಳಲು ಕಾಯುತ್ತಿದ್ದಾರೆ. ದಂಡ ಒಂದು ನೆಪವಷ್ಟೆ ನನಗೆ ಅರ್ಥವಾಗಿದೆ. ಆದರೆ ನಿಮ್ಮ ಕಣ್ಣು ಇನ್ನೂ ತೆರೆಯಲಿಲ್ಲ. ನೀವು ಈ ಪಿಶಾಚಿಗಳಿಂದ ದಯೆಯ ಆಸೆ ಇಟ್ಟುಕೊಂಡಿದ್ದೀರಿ. ಒಂದು ಐದು ಹತ್ತು ಮಣ ತೆಗೆದು ನಿಮಗೆ ಕೊಟ್ಟುಬಿಡುತ್ತಾರೆ. ಎಂದು ನೀವು ಯೋಚಿಸಿದ್ದೀರಾ. ಮುಖ ತೊಳೆದುಕೊಂಡು ಕುಳಿತುಕೊಳ್ಳಿ'[೧೦].

ಬ್ರಾಹ್ಮಣನಾದ ದಾತಾದೀನ ಹಾಗೂ ಮಾತಾದೀನ ಇಬ್ಬರು ಯಾವುದೇ ನೀತಿ ನಿಯಮ ಇಲ್ಲದೆ ಚಮ್ಮಾರ ಹುಡುಗಿಯಾದ ಸಿಲಿಯಾಳನ್ನು ಮನೆಯಲ್ಲಿ ಇಟ್ಟುಕೊಂಡಿರುವುದು ತಪ್ಪು ಎನಿಸುವುದಿಲ್ಲ. ಆದರೆ ಹೋರಿಗೆ ಮಾತ್ರ ಜುನಿಯಾಳನ್ನು ಇಟ್ಟುಕೊಂಡ ಕಾರಣಕ್ಕೆ ಬಹಿಷ್ಕಾರ ಹಾಕಲಾಗುತ್ತದೆ. ಈ ಬಗ್ಗೆ ಧನಿಯಾಳ ವಿಚಾರಗಳು ಹೀಗೆ ನಿರೂಪನೆಗೊಂಡಿವೆ. 'ನಮ್ಮನ್ನು ನಾಶ ಮಾಡಲು ಊರಿನಿಂದ ಓಡಿಸಲು ಹಾಗೂ ನಮ್ಮ ಆಸ್ತಿಯನ್ನು ಕಬಳಿಸಲು ಹೊಂಚು ಹಾಕುವರು. ಇವರು ಎಲ್ಲಾ ರಾಕ್ಷಸರು. ದಂಡ ಎಂಬುದು ಒಂದು ನೆಪ ಮಾತ್ರ. ಇವರು ನಮ್ಮನ್ನು ಕಾಪಾಡುವುದಿಲ್ಲ. ಸಂಪೂರ್ಣವಾಗಿ ಬಡವರ ರಕ್ತ ಹೀರುವ ಕೆಲಸವನ್ನು ಮಾಡುತ್ತಿದ್ದಾರೆ' ಎಂಬುದು ಧನಿಯಾಳ ಶೋಷಿತವಾದ ನೊಂದು ಬೆಂದು ದುಃಖದಲ್ಲಿ ತನ್ನ ಸಂಕಟವನ್ನು ಈ ರೀತಿಯ ಪದಗಳಿಂದ ಹೊರ ಹಾಕುವುದು ಇಲ್ಲಿ ನಿರೂಪಿಸಿದೆ.

ಶೋಷಿತರು ತಮ್ಮ ಶೋಷಣೆಯನ್ನು ನೆನೆದು ಸಂಕಟಗೊಂಡು ಅವರನ್ನು ದೂಷಿಸುವ ಒಂದು ಕ್ರಮವಾಗಿದೆ. ಇಲ್ಲಿ ಹೋರಿ ಮಾತ್ರ ಯಾವುದೇ ವಿರೋಧ ತೋರದೆ ಇದ್ದರೂ, ಧನಿಯಾಳು ಮಾತ್ರ ಶೋಷಕರ ವಿರುದ್ಧ ಕಿಡಿ ಕಾರುವಳು. 'ಮೆಹತಾ ಖಂಡಿತ, ಇದರಲ್ಲಿ ಸಂದೇಹವೇ ಇಲ್ಲ. ಪುರುಷರು ಅನ್ಯಾಯವೆಸಗಿದ್ದಾರೆ. ಆದರೆ ಅದಕ್ಕೆ ಇದು ಜವಾಬಲ್ಲ. ಅನ್ಯಾಯವನ್ನು ನಾಶಮಾಡಿ, ಆದರೆ ನಿಮ್ಮನ್ನು ನಾಶಪಡಿಸಿಕೊಂಡಲ್ಲ'[೧೦].

ಮಾಲತಿ ಸಂಯೋಜಿಸಿದ್ದ ಭಾಷಣ ಒಂದರಲ್ಲಿ ಹೆಣ್ಣು ಗಂಡು ಎಂಬ ತಾರತಮ್ಯ ಮಾತುಗಳು ಬಂದಾಗ ಇಲ್ಲಿ ಪುರುಷರು ಪ್ರಧಾನವಾಗಿದ್ದಾರೆ ಹಾಗು ಪುರುಷರೇ ಜೀವನ ನಡೆಸಲು ಸಮರ್ಥರು ಎಂಬುದು ಮೆಹತಾ ಅವರು ಮಾತನಾಡುವರು. ಮೆಹತಾ ಇವರು ಮೊದಲಿಗೆ ಹೆಣ್ಣನ್ನು ಉತ್ತಮ ರೀತಿಯಲ್ಲಿ ಬಿಂಬಿಸಿ ಕೊನೆಗೆ ಹೆಣ್ಣು ಮಕ್ಕಳು ಗಂಡಿನ ಆಶ್ರಯವಿಲ್ಲದೆ ಬದುಕಲಾರರು ಎಂದು ಹೇಳುವರು. 'ದೇವಿಯವರಿಗೆ ವಿದ್ಯೆಯ ಅವಶ್ಯಕತೆ ಇಲ್ಲ ಎಂದು ನಾನು ಹೇಳುತ್ತಿಲ್ಲ.

ಇದೆ ಅದೂ ಪುರುಷರಗಿಂತ ಹೆಚ್ಚು. ಆದರೆ ಪುರುಷ ಈ ಜಗತ್ತನ್ನು ಹಿಂಸಾ ಕ್ಷೇತ್ರವನ್ನಾಗಿ ಮಾಡಿ ಹಾಕಿರುವ ಆ ವಿದ್ಯೆ ಹಾಗೂ ಆ ಶಕ್ತಿಯಲ್ಲಿ ನೀವು ಏನಾದರು ಅದೇ ವಿದ್ಯೆ ಹಾಗೂ ಅದೇ ಶಕ್ತಿಯನ್ನು ಪಡೆದುಬಿಟ್ಟರೆ ಆಗ ಜಗತ್ತು ಮರುಭೂಮಿಯಾಗಿ ಹೋಗುತ್ತದೆ'[೧೧].

ಈ ಸಾಲುಗಳು ಪುರುಷರ ಶೋಷಣೆಗೆ ಒಳಗಾಗಿ ಜೀವನ ನಡೆಸುವ ನೊಂದು ಬೆಂದು, ಬೇಸತ್ತ ವಿಚಾರಗಳನ್ನು ಹೇಳುತ್ತವೆ. ಗಂಡು ತನ್ನ ಅಧಿಕಾರವನ್ನು ಮನಸಾ ಇಚ್ಛೆ ದುರುಪಯೋಗ ಮಾಡಿಕೊಂಡರೆ ಹೆಣ್ಣು ಒಂದು ವ್ಯವಸ್ಥಿತವಾದ ಅಧಿಕಾರವನ್ನು ಹೊಂದಿರುತ್ತಾಳೆ. ಗಂಡಿನ ದುರಾಧಿಕಾರವನ್ನು ನಿಯಂತ್ರಿಸುತ್ತಾಳೆ. ಹೆಣ್ಣಿಗೂ ಅಧಿಕಾರ ಹಾಗೂ ಅವಶ್ಯಕತೆ ಇದೆ ಎಂಬುದು ಮಾಲತಿಯ ಯೋಚನೆ ಹಾಗೂ ವಿರೋಧವಾಗಿದೆ. ಇದಕ್ಕೆ ಉತ್ತರವಾಗಿ ಮೆಹತಾ ಅವರು ಮೇಲಿನ ವಿಚಾರಗಳಿಗೆ ಸಮ್ಮತಿಯ ಜೊತೆಗೆ ಸಲಹೆಯನ್ನು ನೀಡುವರು. 'ಹೆಣ್ಣು ಮಕ್ಕಳು ಗಂಡಸರ ಅನ್ಯಾಯವನ್ನು ನಾಶಮಾಡಿ. ಆದರೆ (ಹೆಣ್ಣುಗಳನ್ನು) ನಿಮ್ಮನ್ನು ನಾಶಪಡಿಸಿಕೊಳ್ಳಬೇಡಿ' ಎಂದು ಹೇಳುವರು. ಇದು ಸಹ ಶೋಷಿತ ಪರ ಆಲೋಚನೆಯ ಅಂಶಗಳನ್ನು ಒಳಗೊಂಡಿದೆ. ಅನಾದಿ ಕಾಲದಿಂದಲೂ ಶೋಷಣೆ ಒಳಗಾದ ಮಹಿಳೆಯ ಅಂತರಂಗದ ತುಡಿತಗಳ ಬಗ್ಗೆ ಅವರ ಶೋಷಣೆಯ ನೆಲೆಯನ್ನು ಪ್ರತಿಬಿಂಬಿಸುವಂತೆ ಮಾಲತಿ ಹೇಳಿದಳು. ಮಹಿಳೆಯರು ತಮ್ಮ ನಾಶದ ಜೊತೆಗೆ ಪುರುಷರ ಅನ್ಯಾಯ ದುರಾಚಾರವನ್ನು ಖಂಡಿಸಿ ಮುಂದೆ ಸಾಗಬೇಕು ಎಂಬುದು ಮೆಹತಾ ಅವರ ಆಲೋಚನೆಯಾಗಿದೆ. 'ಈ ಜಗತ್ತು ಯಾವುದನ್ನು ದುಃಖ ಎನ್ನುತ್ತದೆಯೋ ಅದೇ ಕವಿಗೆ ಸುಖ. ಹಣ ಹಾಗೂ ಐಶ್ವರ್ಯ, ರೂಪ ಹಾಗೂ ಬಲ, ವಿದ್ಯೆ ಹಾಗೂ ಖುಷಿ ಈ ಸಂಪತ್ತುಗಳು ಈ ಜಗತ್ತನ್ನು ಎಷ್ಟೇ ಆಕರ್ಷಿಸಲಿ, ಆದರೆ ಕವಿಗೆ ಮಾತ್ರ ಇಲ್ಲಿ ಕಿಂಚಿತ್ತು ಆಕರ್ಷಣೆ ಇಲ್ಲ. ಬತ್ತಿ ಹೋದ ಆಸೆಗಳು, ಸತ್ತು ಹೋದ ನೆನಪುಗಳು ಹಾಗೂ ಒಡೆದು ಹೋದ ಎದೆಯ ಕಣ್ಣೀರು, ಇದೇ ಅವನಿಗೆ ಆನಂದ ಹಾಗೂ ಆಕರ್ಷಣೆಯ ವಸ್ತುಗಳು. ಈ ಸಂಪತ್ತುಗಳಲ್ಲಿ ಅವನ ಪ್ರೀತಿ ಕಳೆದುಕೊಂಡ ದಿನವೇ ಅವನು ಕವಿಯಾಗಿ ಉಳಿಯಲಾರ'[೧೨]. ಬರಹಗಾರರು ಸಮಾಜದ ಎಂತಹ ವಸ್ತುಸ್ಥಿತಿಯಲ್ಲಿ ತಮ್ಮ ಸೃಜನಶೀಲತೆಯನ್ನು ಹಾಗೂ ತಮ್ಮ ಬರವಣಿಗೆಯನ್ನು ಶುರುಮಾಡುತ್ತಾರೆ ಮತ್ತು ಎಂತಹ ಸ್ಥಿತಿಯಲ್ಲಿ ಅವರ ಸೃಜನಶೀಲತೆಯ ಒಣಗಿದ ಬರಡು ನೆಲವಾಗುತ್ತದೆ ಎಂಬುದನ್ನು ಮೇಲಿನ ಸಾಲುಗಳು ತುಂಬಾ ಗಂಭೀರವಾಗಿ ನಿರೂಪಿಸುತ್ತಿವೆ. ಬರಹಗಾರರಿಗೆ ಸಮಾಜದಸುಖ ಸಂತೋಷಗಳಿಗಿಂತಲೂ ಹೆಚ್ಚಾಗಿ ನೋವು, ಕಷ್ಟ ಹಾಗೂ ಸಂಕಟಗಳೇ ಸೃಜನಶೀಲತೆಯ ಬೇರು ಎಂಬುದನ್ನು ಮೇಲಿನ ಉಲ್ಲೇಖವು ಸೂಚಿಸುತ್ತಿದೆ.

'ಗೋಬರ ಅಭಿಮಾನ ತುರಬಿದ ನಗುವಿನೊಂದಿಗೆ ಹೇಳಿದ. ಠಾಕೂರರೆ, ಈ ಮೇಲು ಸಂಪಾದನೆಯ ಗೀಳು ಮನುಷ್ಯನನ್ನು ಕೆಡಿಸಿಬಿಡುತ್ತದೆ. ಆದರೆ ನಾವು ಎಷ್ಟು

ಕೆಟ್ಟುಹೋಗಿದ್ದೀವೆ ಎಂದರೆ ಮೋಸ ಮಾಡದೆ ಹೋದರೆ ನಮ್ಮ ಹೊಟ್ಟೆಯೇ ತುಂಬುವುದಿಲ್ಲ. ಲಖನೌದಲ್ಲಿ ಗುಮಾಸ್ತನ ಕೆಲಸ ಸಿಗಬಹುದು. ಆದರೆ ಪ್ರತಿಯೊಬ್ಬ ಸಾಹುಕಾರನಿಗೂ ಪ್ರಾಮಾಣಿಕನೂ ಗಮನವಿಟ್ಟು ಕೆಲಸ ಮಾಡುವವನೂ ಆದ ಮನುಷ್ಯ ಬೇಕು'[13].

ಕಾದಂಬರಿಯ ಈ ಸಾಲುಗಳು ಶೋಷಿತ ಪರವಾದ ಆಲೋಚನೆಗಳನ್ನು ಪ್ರತಿಬಿಂಬಿಸುತ್ತವೆ. ಇಲ್ಲಿ ಹೋರಿರಾಮನ ಮಗನಾದ ಗೋಬರನು ಹೊಸ ಜಗತ್ತಿನಲ್ಲಿ ಹೊಸ ವಿಚಾರಗಳನ್ನು ಕಂಡುಕೊಳ್ಳುವನು. ಗೋಬರ ಮೊದಲು ತಂದೆಯ ಮುಗ್ಧತೆಯನ್ನು ಹಾಗೂ ಶ್ರೀಮಂತರ ದಬ್ಬಾಳಿಕೆಯನ್ನು ಸಹಿಸಿಕೊಳ್ಳುವನು. ಅದನ್ನು ವಿರೋಧಿಸುವ ಮನೋಭಾವವಿದ್ದರೂ ಅಸಹಾಯಕನಾಗಿ ಜೀವನ ಸಾಗಿಸುತ್ತಿದ್ದ. ಹಳ್ಳಿಯಲ್ಲಿ ಬಡವರು ಮಾಡಿದ ತಪ್ಪಿಗೆ ಶಿಕ್ಷೆ ನೀಡದೆ ಅವರನ್ನು ಶೋಷಣೆ ಮಾಡುವರು. ಬಡವರು ಶ್ರೀಮಂತರ ದಬ್ಬಾಳಿಕೆಯನ್ನು ಸಹಿಸಿಕೊಂಡೇ ಬದುಕಬೇಕು ಎಂಬುದು ಇಲ್ಲಿ ಹಳ್ಳಿಯ ಜನರಿಗೆ ಮಾತ್ರ ಅನ್ವಯಿಸುತ್ತದೆ. ಆದರೆ ಹೊಸ ವಿಚಾರವನ್ನು ಕಂಡುಕೊಂಡು ಬಂದ ಗೋಬರನಿಗೆ ಇದು ಸರಿ ಕಾಣುವುದಿಲ್ಲ. ಇವನು ಲಖನೌದಲ್ಲಿ ಹೋಗಿ ಸಣ್ಣ ಪುಟ್ಟ ಕೆಲಸದಲ್ಲಿ ತೊಡಗಿಕೊಂಡಿದ್ದನು. ಈಗ ವ್ಯವಸಾಯವೇ ಬದುಕಿಗೆ ಆಧಾರ ಅಲ್ಲ ಎಂಬುದನ್ನು ತಿಳಿದುಕೊಂಡಿದ್ದನು. ಹಳ್ಳಿಯಲ್ಲಿ ರೈತಾಪಿ ವರ್ಗದವರಿಗೆ ವ್ಯವಸಾಯವೇ ಜೀವಾಳವಾಗಿತ್ತು. ಆದರೆ ಪಟ್ಟಣದಲ್ಲಿ ಬದುಕಲು ನೂರಾರು ದಾರಿಗಳು ಸಿಗುತ್ತವೆ ಎಂದು ಗೋಬರನು ತಿಳಿದಿದ್ದನು. ಹೀಗೆ ಸಿಟಿಗೆ ಹೋಗಿ ಬಂದ ಮೇಲೆ ಗೋಬರನಲ್ಲಿ ವಿಚಾರವಂತಿಕೆ ಹಾಗೂ ಅವನ ಬದುಕಿನ ರೀತಿನೀತಿ ಬದಲಾಗುವುದರ ಜೊತೆಗೆ ಒಳ್ಳೆಯ ಸಂಪಾದನೆಯು ಬರುತ್ತಿತ್ತು. ನಂತರ ಹಳ್ಳಿಗೆ ಬಂದ ಗೋಬರನನ್ನು ನೋಡಿದ ಶ್ರೀಮಂತರು ಅವನನ್ನು ಕಂಡು ವಿಚಾರಿಸಿದರು. ಕೆಲಸದ ಬಗ್ಗೆ ಬದುಕಿನ ಬಗ್ಗೆ ತಿಳಿದುಕೊಳ್ಳುವರು. ಶ್ರೀಮಂತರು ಇವನಿಂದ ಹೊಸ ವಿಚಾರಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸುವರು. ಇಲ್ಲಿ ಗೋಬರನು ಮೊದಲು ಇವರಿಂದ ಶೋಷಣೆಗೆ ಒಳಗಾಗಿ ಹೋದವನೆ. ಅದಕ್ಕೆ ಶ್ರೀಮಂತರ ದುರಾಸೆಯನ್ನು ಅವರ ಮೇಲು ಸಂಪಾದನೆಯನ್ನು ಕಟುವಾಗಿ ವಿರೋಧಿಸುವನು. ಹಾಗೂ ಮನುಷ್ಯನನ್ನು ಕೆಡಿಸಿಬಿಡುತ್ತದೆ. ಮನುಷ್ಯನ ನಿಯತ್ತು ಇದರಿಂದಲೆ ನಾಶವಾಗುತ್ತದೆ ಎಂದು ಹೇಳುವನು.

'ಗೋಬರ ದಾತಾದೀನನನ್ನು ತಮಾಷೆ ಮಾಡಿದ. ಸೊಮಿಯೋರೆ, ನಿಮಗೇನು ಕಡಿಮೆ. ನೀವು ನಿಮ್ಮ ಕುಲದ ಯಾರ ಮನೆಗೆ ಹೋದರು ಸ್ವಲ್ಪವನ್ನಾದರು ಹೊಡೆದುಕೊಂಡು ಬಂದೇ ಬರುತ್ತೀರಿ. ಬರೀ ಕೈಯಂತಲ್ಲೂ ನೀವು ಖಂಡಿತ ಹಿಂತಿರುಗುವುದಿಲ್ಲ. ಮಗು ಹುಟ್ಟಿದಾಗ, ಯಾರಾದರು ಸತ್ತಾಗ, ಮದುವೆ ಮಂಜಿಯಲ್ಲಿ, ಆಪತ್ತಿನಲ್ಲಿ ನೀವು ವ್ಯವಸಾಯ ಮಾಡುತ್ತೀರಿ, ವ್ಯಾಪಾರ ಮಾಡುತ್ತೀರಿ, ದಳ್ಳಾಳಿ ಮಾಡುತ್ತೀರಿ, ಯಾರಾದರೂ ಏನಾದರು ತಪ್ಪು ಮಾಡಿಬಿಟ್ಟರೆ ದಂಡ ವಿಧಿಸಿ ಅವನ

ಮನೆಯನ್ನೇ ಲೂಟಿ ಮಾಡಿಬಿಡುತ್ತೀರಿ. ನಿಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಇಷ್ಟು ಸಂಪಾದನೆ ಸಾಲದೆ? ಇಷ್ಟೊಂದು ಹಣ ಕೂಡಿ ಹಾಕಿಕೊಂಡು ಏನು ಮಾಡಿಕೊಳ್ಳುತ್ತೀರಿ? ನೀವು ಹೋಗುವಾಗ ನಿಮ್ಮ ಜೊತೆ ತೆಗೆದುಕೊಂಡು ಹೋಗುವ ಯಾವುದಾದರೂ ಉಪಾಯ ಮಾಡಿದ್ದೀರಾ?'[೧೪]

ಕಾದಂಬರಿಯ ಈ ಸಾಲುಗಳು ಶ್ರೀಮಂತರು ಬಡವರನ್ನು ಯಾವ ರೀತಿಯಲ್ಲಿ ಶೋಷಣೆ ಮಾಡುತ್ತಿದ್ದರು ಎಂಬುದನ್ನು ತಿಳಿಸುತ್ತವೆ. ಇಲ್ಲಿ ದಾತಾದೀನನು ಹಾಗೂ ಶ್ರೀಮಂತರು ಬೇರೆಯವರ ಶ್ರಮವನ್ನು ಕಸಿದುಕೊಂಡು, ಅವರನ್ನು ಕಷ್ಟಕ್ಕೆ ಸಿಲುಕಿಸುವರು. ಜಾತಿಯ ಹೆಸರಿನಲ್ಲಿ ರೈತರ ಮನೆಗಳಿಗೆ ಹೋಗಿ ಅವರನ್ನು ಶೋಷಣೆ ಮಾಡುವುದನ್ನು ಕಾಣುತ್ತೇವೆ. ಮಗು ಹುಟ್ಟಿದಾಗ, ನಾಮಕರಣ ಮಾಡುವಾಗ, ಜಾತಿಯಲ್ಲಿ ಬ್ರಾಹ್ಮಣನಾದ್ದರಿಂದ ಯಾವುದಾದರೂ ಒಂದು ದೋಷವಿದೆ ಎಂದು ಹೇಳಿ, ಅದನ್ನು ನಂಬುವಂತೆ ಮಾಡಿ, ಅವರನ್ನು ಸುಲಿಗೆ ಮಾಡುವರು. ಸೂಕ್ಷ್ಮಾತಿ ಸೂಕ್ಷ್ಮವಾಗಿ ಶೋಷಿತರ ಪರವಾಗಿರುವ, ಶೋಷಣೆಯ ನಾನಾ ಮುಖಗಳನ್ನು ಹಾಗೂ ಶೋಷಣೆ ಮಾಡುವವರ ತಂತ್ರ ಕುತಂತ್ರಗಳನ್ನು ಮತ್ತು ಆ ಶೋಷಣೆಗೆ ಅವರು ಬಳಸುವ ವಿಧಾನಗಳನ್ನು ಮೇಲಿನ ಗೋಬರನ ಮಾತುಗಳು ನೇರವಾಗಿ ಪ್ರಕಟಿಸುತ್ತವೆ. ಮನುಷ್ಯ ಸತ್ತಮೇಲೆ ಹಣವನ್ನು ತೆಗೆದುಕೊಂಡು ಹೋಗುವುದಿಲ್ಲ. ಎಲ್ಲವನ್ನು ಬಿಟ್ಟು ಮನುಷ್ಯ ಪರಲೋಕ ಯಾತ್ರೆ ಮಾಡುವನು ಎಂಬುದಾಗಿ ಗೋಬರನು ಶೋಷಕರ ದೋಚುವ ಕುತಂತ್ರಗಳನ್ನು ವ್ಯಕ್ತಪಡಿಸುವನು.

'ಹಗಲಿರುಳೂ ಎದೆ ಉರಿಯುತ್ತಿದೆ
ಕುಳಿತು ಮಾವಿನ ರಂಬೆಯಲ್ಲಿ ಕೋಗಿಲೆ ಹೇಳುತ್ತಿದೆ
ಮನಸ್ಸಿಗೆ ಸ್ವಲ್ಪವೂ ನೆಮ್ಮದಿಯಿಲ್ಲ'[೧೫]

ಗೋದಾನ ಕಾದಂಬರಿಯ ಈ ಸಾಲುಗಳು ಹೋರಿರಾಮನ ಮನಸ್ಸಿನ ಸ್ಥಿತಿಯನ್ನು ಹಾಗೂ ವಸಂತ ಋತುವು ಸುಂದರ್ವವಾಗಿದ್ದರೂ ಹೋರಿಯ ಬದುಕಿನಲ್ಲಿ ಮಾತ್ರ ಅದು ಕಾಣಿಸಿಕೊಂಡಿಲ್ಲ ಎಂಬುದನ್ನು ವ್ಯಕ್ತಪಡಿಸುತ್ತವೆ. ಇಲ್ಲಿ ತನ್ನ ಬದುಕಿನ ವ್ಯಸನದಲ್ಲಿ ಹೋರಿರಾಮ ಮುಳುಗಿದ್ದ. ಮನೆಯ ಜವಾಬ್ದಾರಿಯನ್ನು ಹೊತ್ತಿಕೊಳ್ಳಬೇಕಾಗಿದ್ದ ಮಗ ಈಗ ಜೊತೆಯಲ್ಲಿ ಇಲ್ಲ. ವ್ಯವಸಾಯದಲ್ಲಿ ಸಹಾಯ ಮಾಡುವವರು ಇಲ್ಲ. ಗೋಬರನು ತನ್ನ ಹೆಂಡತಿಯನ್ನು ಲಖನೌಕ್ಕೆ ಕರೆದುಕೊಂಡು ಹೋದಮೇಲೆ ತಾಯಿ ಮಗನನ್ನು ಕಾಣದೆ ತಾಯಿ ಪರಿತಪಿಸುವಳು.

ಆ ಸಂದರ್ಭದಲ್ಲಿ ಚಿಂತೆಗಳನ್ನು ಹಾಗೂ ಸಮಸ್ಯೆಗಳನ್ನು ಹೊತ್ತ ಹೋರಿ ರಾಮನಿಗೆ ಯಾವ ವಸಂತವೂ ಮುದ ನೀಡುವುದಿಲ್ಲ. ರಸಿಕನಾದ ವಸಂತ ಸುಗಂಧ ಸೂಸುವುದು ಪ್ರಮೋದ ಹಾಗೂ ಬದುಕಿನ ಐಶ್ವರ್ಯವನ್ನು ಹೊರಚಲ್ಲುತ್ತದೆ. ಕೋಗಿಲೆಗಳು ಮಾವಿನ ಮರದ ಕೊಂಬೆಗಳಲ್ಲಿ ಅವಿತುಕೊಂಡು ಮಧುರವೂ, ಆತ್ಮಸ್ಪರ್ಶಿಯೂ, ರಸಸ್ನಿಗ್ಧವೂ ಆದ ಕೂಗಿನಿಂದ ಎಲ್ಲರನ್ನೂ ತಣಿಸುವುದರ ಜೊತೆಗೆ

ಅವರ ಹೃದಯಗಳಲ್ಲಿ ಆಸೆಗಳನ್ನು ಹಬ್ಬಿಸುತ್ತವೆ. ಮೈನಾ ಪಕ್ಷಿಗಳ ದಿಬ್ಬಣವೇ ಕೂತಿದೆ. ಬೇವಿನ ಸುವಾಸನೆ ಬೀರುತ್ತಿದೆ. ಹೀಗೆ ಪ್ರಕೃತಿಯು ತನ್ನ ಸೊಬಗನ್ನು ಹೊರಹಾಕಿದರೂ ಹೋರಿಯು ಮಾತ್ರ ಆಸೆ ಕಳೆದುಕೊಂಡು ದುಃಖತಪ್ತನಾಗಿದ್ದ. ಅವನ ಮನಸ್ಸು ಸೌಂದರ್ಯ ಹಾಗೂ ಸ್ಫೂರ್ತಿ ಕಳೆದುಕೊಂಡು ಈ ರೀತಿಯ ಹಾಡನ್ನು ಹಾಡತೊಡಗಿತ್ತು.

'ಅಧಿಕಾರಿಗಳೂ ಜಮೀನುದಾರರನ್ನೇ ಸಮರ್ಥಿಸುತ್ತಾರೆ. ಅವರೆಂದೂ ಈ ರೈತರೂ ಮನುಷ್ಯರು, ಅವರಿಗೂ ಮಕ್ಕಳು ಮರಿಗಳಿವೆ, ಅವರಿಗೂ ಮಾನ ಮರ್ಯಾದೆ ಇದೆ ಎಂದು ಯೋಚಿಸುವುದೇ ಇಲ್ಲ. ಇಷ್ಟಕ್ಕೆಲ್ಲಾ ಕಾರಣ ಯಾರು ಗೊತ್ತೆ? ನಾವುಗಳೇ. ನಾವು ಎಲ್ಲದಕ್ಕೂ ತಲೆ ಅಲ್ಲಾಡಿಸುತ್ತೇವೆ. ನಾನು ಇಡೀ ಹಳ್ಳಿಯಲ್ಲಿ ಡಂಗೂರ ಹೊಡೆಸಿಬಿಟ್ಟೆ, ಯಾರೂ ಹೊಸ ಕಾಣಿಕೆ ಕೊಡಬೇಡಿ. ಹಾಗೂ ಜಮೀನನ್ನು ಬಿಡಬೇಡಿ'[೧೬]. ಮೇಲಿನ ಈ ಸಾಲುಗಳನ್ನು ಶೋಷಿತ ವರ್ಗದವರು ಹೇಳಿರಬಹುದು ಎನಿಸುತ್ತದೆ. ಆದರೆ ವಿಚಿತ್ರವೆಂದರೆ ಈ ಮಾತುಗಳನ್ನು ಆಡಿದವರು ಶೋಷಿತ ವರ್ಗದವರಲ್ಲ; ಬದಲಾಗಿ ಈ ಮಾತುಗಳನ್ನು ಆಡಿದವನು ಜಮೀನುದಾರನಾದ ರಾಮಸೇವಕ. ಶೋಷಿತಪರ ಆಲೋಚನೆಗಳು ಶೋಷಿತರ ಬಾಯಿಯ ಮೂಲಕವೇ ಬರುತ್ತವೆ ಹಾಗೂ ಅವರಿಂದಲೇ ಬರಬೇಕು ಎಂಬುದು ಒಂದು ಬಗೆಯ ಯಾಂತ್ರಿಕ ಗ್ರಹಿಕೆ. ಆದರೆ ಸಮಾಜವಾದಿ ಸೃಜನಶೀಲತೆ ಎಂಬುದು ಈ ಬಗೆಯ ನಮ್ಮ ಯಾಂತ್ರಿಕ ಗ್ರಹಿಕೆಯನ್ನು ಬುಡಮೇಲು ಮಾಡುತ್ತದೆ. ಶೋಷಿತರ ಪರವಾದ ಆಲೋಚನೆಗಳು ಶೋಷಕರ ಕಡೆಯಿಂದಲೂ ಬರಬಹುದು. ಅದು ಆತ್ಮವಿಮರ್ಶೆಯಾಗಿಯೊ ಅಥವಾ ಒಂದು ಬಗೆಯ ಹಪಾಹಪಿಯಾಗಿಯೊ ಪ್ರಕಟವಾಗಬಹುದು. ಈ ಬಗೆಯ ಅಭಿವ್ಯಕ್ತಿಯ ಸಂಕೀರ್ಣ ಆಯಾಮಗಳನ್ನು 'ಗೋದಾನ'ವು ತನ್ನ ನಿಷ್ಪಕ್ಷಪಾತಿಯಾದ ವರ್ಗದೃಷ್ಟಿಕೋನದಲ್ಲಿ ನಿರೂಪಿಸಿದೆ ಎಂಬುದನ್ನು ಇಲ್ಲಿ ಒತ್ತಿಹೇಳಬೇಕಾಗಿದೆ.

**ಕೊನೆ ಟಿಪ್ಪಣಿ**

೧. ಪುಟ ೧೧

೨. ಪುಟ ೧೨

೩. ಪುಟ ೨೪, ೨೫

೪. ಪುಟ ೨೨

೫. ಪುಟ ೨೭

೬. ಪುಟ ೩೫

೭. ಪುಟ ೫೦

೮. ಪುಟ ೧೫೩

೯. ಪುಟ ೧೭೩

೧೦. ಪುಟ ೨೧೭

೧೧. ಪುಟ ೨೧೬

೧೨. ಪುಟ ೨೬೦

೧೩. ಪುಟ ೨೮೧

೧೪. ಪುಟ ೨೮೧, ೩೨೪

# ಅಧ್ಯಾಯ ೭

## ಸಮಾರೋಪ

'ಪ್ರೇಮ್‌ಚಂದ್ ಅವರ ಗೋದಾನ ಕಾದಂಬರಿಯ ವಿಶ್ಲೇಷಣೆ' ಎಂಬ ಅಧ್ಯಯನದ ಈ ಸಂಪ್ರಬಂಧದಲ್ಲಿ, ಒಂದನೇ ಅಧ್ಯಾಯದಲ್ಲಿ ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿಯನ್ನು ವಿವರಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಗೋದಾನ ಕಾದಂಬರಿಯಲ್ಲಿ ಭೂಮಾಲೀಕರು ಮತ್ತು ಗೇಣಿದಾರರ ಸಂಬಂಧಗಳ ಬಗ್ಗೆ ಚರ್ಚಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಗೋದಾನ ಕಾದಂಬರಿಯಲ್ಲಿ ಹೆಣ್ಣು ಗಂಡಿನ ಸಂಬಂಧಗಳನ್ನು ಕುರಿತು ಚರ್ಚಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ರೈತಾಪಿ ಬದುಕಿನ ವಿನ್ಯಾಸಗಳನ್ನು ಚರ್ಚಿಸಲಾಗಿದೆ. ಐದನೇ ಅಧ್ಯಾಯದಲ್ಲಿ ಮಾನವ ಸ್ವಭಾವಗಳನ್ನು ಕಾದಂಬರಿಯು ಶೋಧಿಸುವ ಆಯಾಮಗಳನ್ನು ಪರಿಶೀಲಿಸಲಾಗಿದೆ. ಆರನೇ ಅಧ್ಯಾಯದಲ್ಲಿ ಕಾದಂಬರಿಯು ನಿರೂಪಿಸುವ ಶೋಷಿತಪರ ಆಲೋಚನೆಗಳನ್ನು ಕುರಿತು ಚರ್ಚಿಸಲಾಗಿದೆ.

ಪ್ರೇಮ್‌ಚಂದ್ ಅವರ 'ಗೋದಾನವು' ವಸಾಹತುಶಾಹಿ ಕಾಲಘಟ್ಟದಲ್ಲಿ ಸೃಷ್ಟಿಯಾದ ಸೃಜನಶೀಲ ಸಮಾಜವಾದಿ ಕಾದಂಬರಿಯಾಗಿದೆ. ಆ ಚಾರಿತ್ರಿಕವಾದ ಆ ಕಾಲಘಟ್ಟದಲ್ಲಿ ವಸಾಹತುಶಾಹಿ ಪರವಾದ ಸಾಹಿತ್ಯಕ ದೃಷ್ಟಿಕೋನವೇ ಬಹುತೇಕ ಮೇಲುಗೈ ಸಾಧಿಸಿದ್ದ ಅವಧಿಯಾಗಿತ್ತು. ಆದರೆ ಪ್ರೇಮ್‌ಚಂದ್ ಅವರು ಈ ಬಗೆಯ ಗ್ರಹಿಕೆ ಚೌಕಟ್ಟಿನಿಂದ ತಮ್ಮನ್ನು ರಾಜಕೀಯ ದೃಷ್ಟಿಕೋನದ ಮೂಲಕ ಬದಲಾಯಿಸಿಕೊಂಡಿದ್ದಾರೆ. ಭಾರತೀಯ ಸಮಾಜವನ್ನು ಪ್ರೇಮ್‌ಚಂದ್ ಅವರು ಉಳಿದೆಲ್ಲ ಪ್ರಗತಿಶೀಲ ಬರಹಗಾರರಗಿಂತ ಭಿನ್ನವಾಗಿಯೇ ಗ್ರಹಿಸುತ್ತಾರೆ ಮತ್ತು ಅದನ್ನು ಸಾಹಿತ್ಯಕವಾಗಿ ನಿರೂಪಿಸುತ್ತಾರೆ. ಊಳಿಗಮಾನ್ಯಶಾಹಿಯ ಸಾಮಾಜಿಕ ಸಂಬಂಧಗಳನ್ನು ಎಲ್ಲಿಯೂ ಸರಳಗೊಳಿಸದೆ, ಎಲ್ಲಿಯೂ ಯಾಂತ್ರಿಕಗೊಳಿಸದೆ ಮತ್ತು ಸೃಜನಶೀಲತೆಯ ಹಿಂದೆ ಒಂದು ಮಹಾನ್ ಚಾಲಕಶಕ್ತಿಯಾಗಿ ಕೆಲಸ ಮಾಡಿರುವ ಪ್ರಗತಿಪರ ರಾಜಕೀಯ ದೃಷ್ಟಿಕೋನವು ತೋರಿಕೆಯ ಮೇಲುಗೈ ಸಾಧಿಸದಂತೆ ಈ ಕಾದಂಬರಿಯನ್ನು ರೂಪಿಸಿದ್ದಾರೆ.

ರೈತಾಪಿ ವರ್ಗದ ಆರ್ಥಿಕ ಹಾಗೂ ಕೌಟುಂಬಿಕ ಸಮಸ್ಯೆಗಳನ್ನು, ಮಹಿಳಾ ಲೋಕದ ಯಾತನಾಮಯ ಬದುಕಿನ ನಾನಾ ಸ್ತರಗಳನ್ನು, ಹೆಣ್ಣು ಗಂಡುಗಳ ಕೌಟುಂಬಿಕ ಮತ್ತು ಕೌಟುಂಬಿಕೇತರ ಸಂಬಂಧಗಳನ್ನು ಎಲ್ಲಿಯೂ ಸರಳಗೊಳಿಸದೆ ಅದರೆಲ್ಲ ಸಂಕೀರ್ಣಗಳೊಂದಿಗೆ ನಿರೂಪಿಸಿದ್ದಾರೆ. ಕುಟುಂಬದ ಸಮಸ್ಯೆಗಳಿರಬಹುದು, ವ್ಯಕ್ತಿಯ ವೈಯಕ್ತಿಕ ಸಮಸ್ಯೆಗಳಿರಬಹುದು. ಇವಕ್ಕೆಲ್ಲ ಅಲೌಕಿಕದ ಕಾರಣಗಳಿವೆ ಎಂಬುದನ್ನಾಗಲಿ, ಇಲ್ಲವೆ ಅವುಗಳಿಗೆಲ್ಲ ಪೂರ್ವಜನ್ಮದ ಕಾರಣಗಳಿವೆ ಎಂಬುದನ್ನಾಗಲಿ ಒಪ್ಪದೆ, ಅವುಗಳನ್ನು ಪ್ರತಿಯೊಂದು ಪಾತ್ರದ ಸಹಜ ಬೆಳವಣಿಗೆಯ

ಮೂಲಕ ಅನಾವರಣಗೊಳಿಸುತ್ತ ಹೋಗುವ ಇಲ್ಲಿಯ ನಿರೂಪಣೆಯು ಸ್ಥಾಪಿತ ಸಾಮಾಜಿಕ ಆಲೋಚನೆಯ ಚೌಕಟ್ಟುಗಳನ್ನು ನಿಧಾನವಾಗಿ ಬಡುಮೇಲು ಮಾಡುತ್ತದೆ.

'ಗೋದಾನ'ವನ್ನು ಓದಿದ ನಂತರ ಅಥವಾ 'ಗೋದಾನ'ದ ಒಳಗೆ ನಾವು ಒಂದು ಸಲ ಹೋಗಿ ಬಂದ ನಂತರ ಇಡೀ ರೈತಾಪಿ ಬದುಕಿನಲ್ಲಿ, ರೈತರಿಗೆ, ಗೇಣಿದಾರರಿಗೆ, ಮಹಿಳೆಯರಿಗೆ ಇರುವ ಸಮಸ್ಯೆಗಳ ಅರಿವು ಆಗುತ್ತದೆ. ಅಷ್ಟು ಮಾತ್ರವಲ್ಲ; ಸಮಸ್ಯೆಗಳು ಎಂಬುವು ಕೇವಲ ಕೆಳವರ್ಗಗಳಿಗೆ ಮಾತ್ರವಿಲ್ಲ; ಅವು ಮೇಲು ವರ್ಗಗಳನ್ನೂ ಬಿಟ್ಟಿಲ್ಲ ಎಂಬ ಹೊಸ ಜಗತ್ತಿನ ಪರಿಚಯವೂ ನಮಗಾಗುತ್ತದೆ. ಹಾಗಾಗಿ ಕಾದಂಬರಿಯು ಬಡವರು ಮತ್ತು ಶ್ರೀಮಂತರನ್ನು ಹಾಗೂ ಭೂಮಾಲೀಕರು ಮತ್ತು ಗೇಣಿದಾರರನ್ನು ಎಲ್ಲಿಯೂ ಕಪ್ಪು ಬಿಳುಪು ಮಾದರಿಯಲ್ಲಿ ಚಿತ್ರಿಸುವುದಿಲ್ಲ. ಭೂಮಾಲೀಕರಲ್ಲಿ ಹಾಗೂ ಶ್ರೀಮಂತರಲ್ಲಿ ಇರಬಹುದಾದ ಶೋಷಕರ ಪರವಾದ ಆಲೋಚನೆಗಳನ್ನು ಹಾಗೂ ಹಿತಾಸಕ್ತಿಗಳನ್ನು ಕಾದಂಬರಿಯು ತನ್ನ ಸೃಜನಶೀಲ ಅಂತರಾಳದ ಮೂಲಕ ಅನಾವರಣಗೊಳಿಸುತ್ತಾ ಸಾಗುತ್ತದೆ. ಅದೇ ರೀತಿಯಲ್ಲಿ ಬಡವರಲ್ಲಿ ಇರಬಹುದಾದ ಶೋಷಿತಪರ ಹಿತಾಸಕ್ತಿಗಳನ್ನು ಒಪ್ಪಿಕೊಳ್ಳುವಂತಹ ಮುಗ್ಧತೆಯನ್ನೂ, ಊಳಿಗಮಾನ್ಯಶಾಹಿಯ ಮೌಲ್ಯಗಳಿಗೆ ಹೊಂದಿಕೊಂಡು ಹೋಗುವಂತಹ ವಿಧೇಯ ಮತ್ತು ಅಸಹಾಯಕತೆಯನ್ನೂ ಅಷ್ಟೇ ಸೃಜನಶೀಲವಾಗಿ ನಿರೂಪಿಸಿದೆ.

## ಗ್ರಂಥಋಪಣ

ಪ್ರೇಮ್‌ಚಂದ್, ಗೋದಾನ, ೨೦೦೮, ಭಾರತೀ ಪ್ರಕಾಶನ, ಮೈಸೂರು, (ಅನು: ಎ ಜಾನಕಿ)

ಪ್ರೇಮ್‌ಚಂದ್, ಗೋದಾನ, ೧೯೫೬, ೬೧, ೯೦, ಗೀತಾ ಬುಕ್ ಹೌಸ್, ಮೈಸೂರು, (ಅನು: ರಾಮಕೃಷ್ಣ ಉಡುಪ)

ಶೇಷಗಿರಿರಾವ್ ಎಲ್.ಎಸ್., ಸಾಹಿತ್ಯ, ೧೯೯೯, ಜ್ಞಾನದೀಪ ಮಾಲೆ, ಸ್ವಪ್ನ ಬುಕ್‌ಹೌಸ್ ಬೆಂಗಳೂರು

ಮದನ್‌ಲಾಲ್‌ಮಧು, ಗೋರ್ಕಿ ಮತ್ತು ಪ್ರೇಮ್‌ಚಂದ್ ಎರಡು ಅಮರ ಪ್ರತಿಭೆಗಳು, ೧೯೮೮ ರಾದುಗ ಪ್ರಕಾಶನ ಮಾಸ್ಕೊ, ನವಕರ್ನಾಟಕ ಪಬ್ಲಿಕೇಶನ್ ಬೆಂಗಳೂರು

ಪ್ರಕಾಶ್‌ಚಂದ್ರಗುಪ್ತ, ಪ್ರೇಮ್‌ಚಂದ್, (ಭಾರತೀಯ ಸಾಹಿತ್ಯ ನಿರ್ಮಾಣಕಾರರು) ೧೯೭೨, ೯೦, ಕೇಂದ್ರ ಸಾಹಿತ್ಯ ಅಕಾಡೆಮಿ ನವದೆಹಲಿ

ಬಸವರಾಜ ಸಾದರ, ಕನ್ನಡ ಸಾಹಿತ್ಯ ಘಟ್ಟಗಳು, ೨೦೦೭, ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ

ರಾಘವೇಂದ್ರರಾವ್ ಎಚ್‌ಎಸ್, ಪ್ರಗತಿಶೀಲ, ೧೯೯೦, ೨೦೦೦, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

ಮಣಿಪಾಲ ಆರ್‌ಕೆ, ವಿಮರ್ಶೆಯ ಸವಾಲು, ೨೦೦೬, ಸಂವಾದ ಪ್ರಕಾಶನ ಮಲ್ಲಾಡಿಹಳ್ಳಿ

ದು ನಿಂ ಬೆಳಗಲಿ, ಸಾಹಿತ್ಯ ಸಾಧನ ಮತ್ತು ಜೀವನ, ೧೯೯೪, ವಿಶ್ವಕರ್ನಾಟಕ ಸಾಹಿತ್ಯ ಮಂಟಪ

ದು ನಿಂ ಬೆಳಗಲಿ, ಪ್ರೇಮ್‌ಚಂದ್, ಬದುಕು ಬರಹ, ೧೯೮೦, ನವಕರ್ನಾಟಕ ಪಬ್ಲಿಕೇಶನ್ ಬೆಂಗಳೂರು

ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ೧೯೫೨ ಮನೋಹರ ಗ್ರಂಥಮಾಲೆ ಧಾರವಾಡ

ಪ್ರೇಮ್‌ಚಂದ್ (ಅನು: ಎಚ್‌ಡಿ ಶಾಂತ) ರಂಗಭೂಮಿ ೨೦೦೭ ಸಾಯಿನಾಥ ಗ್ರಾಫಿಕ್ಸ್ ಕಾಟನ್‌ಪೇಟೆ ಮುಖ್ಯ ರಸ್ತೆ ಬೆಂಗಳೂರು

ಅಶೋಕಶೆಟ್ಟರ್, ಕನ್ನಡ ಸಾಹಿತ್ಯದ ಪ್ರಗತಿಶೀಲ ಪರ್ವ ಒಂದು ಚಾರಿತ್ರಿಕ ಹಿನ್ನೋಟ,

ಅಶೋಕ ಟಿಪಿ, ಪುಸ್ತಕ ಪ್ರೀತಿ, ೨೦೦೦ ಅಕ್ಷರ ಪ್ರಕಾಶನ ಹೆಗ್ಗೋಡು

## ಅನುಬಂಧ

### ೧. ಪ್ರೇಮ್‌ಚಂದ್ ಅವರ ಸಾಹಿತ್ಯ

ಪ್ರೇಮ್‌ಚಂದರ ಕಥೆಗಳು, ಅನು: ಶಾ. ಬಾಲೂರಾವ್, ಸಂ. ರಾಧಾಕೃಷ್ಣ

ಮುಕ್ತಿಧನ ಮತ್ತು ಇತರೆ ಕಥೆಗಳು

ರಾಣಿ ಸಾರಂಧ ಮತ್ತು ಇತರೆ ಕಥೆಗಳು

ದೇವತೆ ಹಾಗೂ ಇತರೆ ಸಣ್ಣ ಕಥೆಗಳು

ನಾಗಪೂಜೆ ಮತ್ತು ಇತರೆ ಕಥೆಗಳು

ಕುಸುಮ ಮತ್ತು ಇತರೆ ಕಥೆಗಳು

ಮುನ್ಷಿ ಪ್ರೇಮ್‌ಚಂದ್ ಅವರ ಕಿರು ಕಥೆಗಳು

ಮಾನ ಸರೋವರ

ಪ್ರೇಮ ದೇವದಾಸಿ

ಸಮರಯಾತ್ರೆ
ಸತ್ಯಾಗ್ರಹ
ಈದ್‌ಗಾಹ್
ಪ್ರೇಮ್‌ಚಂದ್ ಕಥೆಗಳು
ಅನು: ಎ. ಜಾನಕಿ
ಸಂಪುಟ ೧, ೨, ೩, ೪, ೫
ಭಾರತೀ ಪ್ರಕಾಶನ, ಮೈಸೂರು

೨. ಪ್ರೇಮ್‌ಚಂದ್ ಅವರು ಬರೆದ ಕಾದಂಬರಿಗಳು
ದೇವಸ್ಥಾನದ ರಹಸ್ಯ
ಪ್ರೇಮಾಶ್ರಮ
ರಂಗಭೂಮಿ
ವರದಾನ
ಕಾಯಕಲ್ಪ
ನಿರ್ಮಲ
ಪ್ರತಿಜ್ಞಾ
ಸೇವಾ ಸದನ
ಗಬನ್
ಕರ್ಮಭೂಮಿ
ಗೋದಾನ
ಪ್ರೇಮ
ಮಂಗಳ ಸೂತ್ರ

೩. ಪ್ರೇಮ್‌ಚಂದ್ ಅವರನ್ನು ಕುರಿತ ಕೃತಿಗಳು
ಕಮಲ್‌ಕಾಶಿಪಾಹೀ ಲೇಖನಿ ಹಿಡಿದ ಸಿಪಾಯಿ
ರಾಮ್‌ವಿಲಾಸ್ ಶರ್ಮ ಪ್ರೇಮ್‌ಚಂದ್ ಮತ್ತು ಅವರ ಯುಗ
ಮದನ್‌ಗೋಪಾಲ್ ಲೇಖನಿ ಹಿಡಿದ ಕಾರ್ಮಿಕ
ರಾಜೇಶ್ವರ್‌ಗುರು ಪ್ರೇಮ್‌ಚಂದ್ ಒಂದು ಅಧ್ಯಯನ
ಮಹೇಂದ್ರಭಟ್ ನಾಗರ್ ಸಮಸ್ಯಾತ್ಮಕ ಕಾದಂಬರಿಕಾರ ಪ್ರೇಮ್‌ಚಂದ್
ಗಂಗಾಪ್ರಸಾದ್ ವಿಮಲ್ ಪ್ರೇಮ್‌ಚಂದ್ ಮತ್ತು ಇತರೆ
ಕಮಲ್‌ಕಾಶಿಪಾಹೀ ಲೇಖನಿ ಹಿಡಿದ ಸಿಪಾಯಿ
ರಾಮ್‌ವಿಲಾಸ್ ಶರ್ಮ ಪ್ರೇಮ್‌ಚಂದ್ ಮತ್ತು ಅವರ ಯುಗ
ಮದನ್‌ಗೋಪಾಲ್ ಲೇಖನಿ ಹಿಡಿದ ಕಾರ್ಮಿಕ
ರಾಜೇಶ್ವರ್‌ಗುರು ಪ್ರೇಮ್‌ಚಂದ್ ಒಂದು ಅಧ್ಯಯನ
ಮಹೇಂದ್ರಭಟ್ ನಾಗರ್ ಸಮಸ್ಯಾತ್ಮಕ ಕಾದಂಬರಿಕಾರ ಪ್ರೇಮ್‌ಚಂದ್
ಗಂಗಾಪ್ರಸಾದ್ ವಿಮಲ್ ಪ್ರೇಮ್‌ಚಂದ್ ಮತ್ತು ಇತರೆ